ಶ್ರೀಃ

# ಯಕ್ಷಗಾನ ಬೈದ್ಯರ್ಕಳ ಪ್ರತಾಪ



ಗ್ರಂಥಕರ್ತ: ದಿ। ಪಂದುಬೆಟ್ಟು ವೆಂಕಟರಾಯರು






ಉಡುಪಿ
ಪಾವಂಜೆ ಗುರುರಾವ್ ಅಂಡ್ ಸನ್ಸ್

*Yakṣagāna Baidyarkala Pratāpa*

ಆರನೆಯ ಅಚ್ಚು

ಶಾ. ಶಕ ೧೮೯೯






ಪ್ರಕಾಶಕರು

**ಪಾವಂಜೆ ಗುರುರಾವ್ ಅಂಡ್ ಸನ್ಸ್**
ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ
ಉಡುಪಿ



ಅಚ್ಚುಗಾರರು

**ಪಾವಂಜೆ ಗುರುರಾವ್ ಅಂಡ್ ಸನ್ಸ್**
ಶ್ರೀಕೃಷ್ಣಮುದ್ರಣಾಲಯ
ಉಡುಪಿ



ಬೆಲೆ: ರೂ. ~~0.50~~ 0.75

ಶ್ರೀಃ



॥ ಶ್ರೀರಾಧಾಕೃಷ್ಣಾಯ ನಮಃ ॥

### ಪುಣ್ಯಪುರುಷರ ಚರಿತ್ರೆಯೊಳಗಣ

# ಯಕ್ಷಗಾನ ಬೈದ್ಯರ್ಕಳ ಪ್ರತಾಪ

---

ವೃತ್ತ

ಕೃಷ್ಣಂ ಗೋಪಾಲಂ ಗೋವರ್ಧನೋದ್ಧರಣಂ ಕೃಷ್ಣಂ ಸದಾ ಪಾವನಮ್ ।
ಕೃಷ್ಣಂ ಬಾರಕಪುರನಿಜನಿಲಯಂ ಕೃಷ್ಣಂ ವಂದೇ ಪಾಲಕಮ್ ॥

ರಾಗ ನೀಲಾಂಬರಿ ಆದಿತಾಳ

ಲಂಬೋದರ ದೇವ । ಗಜಾನನ । ನಂಬಿದೆ ತವ ಪದವ ॥ ನಂಬಿದವರ ಕಾವ ನೆಂಬ ಬಿರುದು ನಿನ । ಗಿಂಬ ಪಾಲಿಸು ವರ ಶಂಭುಸುಪ್ರೀತ ॥ ೧ ॥ ಭಕ್ತಿಯೊಳ್ ನಿನ್ನ । ಭಜಿಸುವೆನನುದಿನ । ಮುಕ್ತಿಪ್ರದಾಯಕನೆ ॥ ಶಕ್ತಿಪ್ರದಾಯಕ ಗುಣಗಣನಾಯಕ । ಭಕ್ತಜನರ ಪೊರೆ ಶಕ್ತಿಸ್ವರೂಪನೆ ॥ ೨ ॥ ವಿಘ್ನವನರಿಯೆನು । ವಿಘ್ನೇಶನೆ ನಿ । ರ್ವಿಘ್ನತೆಯೊಳು ಕೃತಿಯ ॥ ಭಗ್ನವಾಗದ ತೆರ ಪಾಲಿಸನುಗ್ರಹ । ಮಗ್ನನಾದೆನು ತವ ಧ್ಯಾನದೊಳ್ ನಿರತ ॥ ೩ ॥

ರಾಗ ಉಮಾಭರಣ ತ್ರಿವುಡೆತಾಳ

ಮತಿಯು ಬೇಡುವೆ ಭಾರತಿ । ಸರಸ್ವತಿ ॥ ಪ ॥ ಗತಿರಹಿತನಿಂಗತಿಶಯದ ಸನ್। ಮತಿಯು ಪಾಲಿಸು ಕೈಮುಗಿದು ನಿ । ನ್ನತಿಶಯದ ಮಹಿಮೆಯನು ನಿತ್ಯದಿ । ಸ್ತುತಿಸುವನ ವರವಿತ್ತು ಪಾಲಿಸು ॥ ೧ ॥ ಬುದ್ಧಿವಂತಗೆ ಬುದ್ಧಿಯು । ವಿದ್ಯೆಯೊಳು ನೀ । ನಿದ್ದು ರಕ್ಷಿಸೆ ಸಿದ್ಧಿಯು । ಬಪ್ಪವುದು ಬದ್ಧವು ॥ ಇದ್ದರೇನುಪ ಕೃತಿಯು ದೈವಗ । ಳಿದ್ದು ಮಾಡುವುದೇನು ತವ ಪದ । ಬದ್ಧವಾಗಿಯೆ ನಂಬ

ದನ ನೀ । ನಿದ್ದು ರಕ್ಷಿಸಲಾರೆ ದಿಟವಿದು ॥ ೨ ॥ ಅರಿಯೆ ನಾನಿದರೊಳೊಂದು। ಶಾರದೆ ನೀನೆ । ಪೊರೆಯಬೇಕೆನುತ ಬಂದು । ಕೈಮುಗಿದು ನಿಂದು ॥ ಸ್ಮರಣೆ ಯನು ಬಿಡದೆಸಗುವನ ಮೇಲ್ । ಕರುಣದೋರಿದರೀ ಕೃತಿಯು ಕರ । ಭರಣ ವಪ್ಪುವುದಿದಕೆ ಸಂಶಯ । ವಿರದು ನಿಜ ನಂಬಿದನ ರಕ್ಷಿಸು ॥ ೩ ॥

ವಾರ್ಧಿಕ

ಮತಿಯೊಪ್ಪಿ ಸ್ವಪರದೈವವ ಬೇಡಿ ಕೊಂಡಾಡಿ । ಹಿತವಂತರುಗಳ ಮನ ದೊಳು ಸ್ತುತಿಸಿ ದಿಕ್ಪಾಲ । ತತಿಗೊಂದಿಸುತ ಶಂಭುಸುತನ ನೆನೆದತುಳಬಲ ಗೌರಿ ಗೌರೀಶನ ರಮಾ ॥ ಪತಿಗೆ ತಲೆವಾಗಿ ಮನೆದೇವಿಗೆರಗುತ ವಾತ । ಸುತನ ಕೊಂಡಾಡಿ ಗುರುಶ್ರೇಷ್ಠರಂ ಬೇಡುತೀ । ಕೃತಿ ಯಥಾಮತಿಯಾಗಿ ರಚಿಸೆ ಬಲ ವೀಯೆ ಭಾರತಿಗೊಂದಿಸುತ ಪೇಳ್ವೆನು ॥ ೧ ॥

ರಾಗ ಕಾಂಭೋಜಿ ತ್ರಿವುಡೆತಾಳ

ರೂಢಿಯೊಳು ಪೆಸರಾಂತಿಹುದು ತುಳು । ನಾಡ ಪೂರ್ವದೊಳೆಮ್ಮ ಭೂ ಪರು । ಬೀಡುಗಳ ರಚಿಸುತ್ತಲಾಳಿದ । ಪಾಡದೆಂತು ॥ ೧ ॥ ಪಡುಮಲಾಧಿಪ ಪೆರುಮಳಾಖ್ಯನು । ಒಡೆಯ ಕೇಮರ ಪಂಜದಧಿಪನು । ಕಡುಗಲಿಯು ಎಣ್ಮೂರ ಭೂಪನು । ದೇವರಾಜ ॥ ೨ ॥ ನಾಡ ಪಾಲಿಸುತಿರಲು ಪಡುಮಲೆ । ಬೀಡಿನರೆ ಯೊಳು ಕೋಟಿ ಚೆನ್ನಯ । ಕೂಡೆ ಜನಿಸಿದ ಪರಿಯ ಮಲ್ಲನ । ಮೋಡಿತನದ ॥ ೩ ॥ ಬಿಂಕವನು ಮುರಿದವನ ವಧಿಸುತ । ಅಂಕೆಯರಿಯದೆ ಬಾಲರೀರ್ವರು। ಕೊಂಕದಯ್ದಿದರೆಂತು ಪಂಜಕೆ । ಮಂಕು ಮನುಜ ॥ ೪ ॥ ಚಂದುಗಿಡಿ ವಿರಚಿ ಸಿದ ಮೋಸದ । ಮುಂದಿರವ ಪೊಕ್ಕಲ್ಲಿ ಪರಿಭವ । ಚಂದದಲಿ ಪಾರಾದ ಚರಿ ತೆಯ । ದಂದವೆಂತು ॥ ೫ ॥ ವೀರರೇತಕೆ ದೇವರಾಜನ । ಸೇರಿದರು ಮುಂ ದಾವ ಕದನದಿ । ಸೂರೆಗೊಂಡರದೆಂತು ಜಯವನು । ಧೀರತನದಿ ॥ ೬ ॥ ಬಿಲ್ಲ ವೀರರ ಗರಡಿಯೊಳಗಿಹ । ರಲ್ಲಿ ಪಾಡುವರವರ ಕೀರ್ತಿಯ । ದೆಲ್ಲವನು ನಾ ಯಕ್ಷಗಾನದಿ । ಸೊಲ್ಲುತಿಹುದ ॥ ೭ ॥ ಮನವರಿತು ಜನವರಿತಿರಾದರೆ । ಅನು ದಿನದಿ ಸುಖಸಂಪದವ ತಾ । ನನುಗೊಳಿಪ ಲಕ್ಷ್ಮೀಶ ಕ್ರೋಡಾ । ಸನ ಮಹೇಶ॥ ॥ ೮ ॥ ಪ್ರಾಸಗಣಲಯುವರಿಯೆ ಮಾತ್ರ ತಿ । ಲಾಂಶವೆನ್ನೊಳಗಿಲ್ಲವಿದರ । ಭ್ಯಾಸವೆಳ್ಳನಿತಿಲ್ಲ ಕ್ಷಮಿಸಿರಿ । ದೋಷಗಳನು ॥ ೯ ॥

ಭಾಮಿನಿ

ಧಾರಿಣೀಶ್ವರನಿತ್ತ ಸಂತತ । ಭಾರವಣೆಯೊಳು ಪಡುಮಲೆಯ ಪರಿ । ವಾರ ಮಾಗಧ ವಂದಿ ಮಿತ್ರ ಕಳತ್ರ ಪುರಜನರ ॥ ಮೀರುವನುರಾಗದಲಿ ಪಾಲಿಸ ।

ಲೇರೆ ರವಿ ಮೂಡಣದೊಳೆಸೆದನು । ಚಾರುತರ ವಿಭವದೊಳಗೋಲಗಮಧ್ಯ ರವಿಯಂತೆ ॥ ೧ ॥

ರಾಗ ನೀಲಾಂಬರಿ ಝಂಪೆತಾಳ

ಹರುಷದಿಂ ಕೇಳಿರಿಂತಿರಲು ಶ್ರೀಹರಿದಯದಿ । ಪೆರುಮಳಾಖ್ಯನು ನಿರತ ಪರಮ ಸಂತಸದಿ ॥ ೧ ॥ ಇರಲೊಂದು ದಿನ ಶಬರರಯ್ದೆ ಬಿನ್ನವಿಸಿದರು । ತೆರಳ ಬೇಹುದು ಬೇಟೆಗೆನುತ ನಮಿಸಿದರು ॥ ೨ ॥ ಕೇಳಿ ಹರುಷಿತನಾಗಿ ನುಡಿದನೆಲ ವ್ಯಾಧರಿರ । ಪೇಳಿದಾ ನುಡಿಯುಹುದು ಬರಲಿ ಬಲಸಹಿತ ॥ ೩ ॥ ಬೇಟೆಯನು ಮನದಣಿಯೆ ತೀಟಬೇಹುದು ನಮಗೆ । ಸಾಟಿ ಬೇರಿಲ್ಲೆಂಬ ಕೂಟ ಬರಲಿತ್ತ ॥ ॥ ೪ ॥ ಕತ್ತಿ ಬಲ್ಲೆಹ ಸಬಳ ಚಿತ್ರತರನಾದ ಬಲೆ । ಉತ್ತಮರ ಕೂಡೆ ವನದತ್ತ ನಡೆತಂದ ॥ ೫ ॥

ರಾಗ ಭೈರವಿ ಆದಿತಾಳ

ಆಡುತ್ತಾಡುತ್ತ ಬಂದರಾಗ । ಮೃಗಬೇಟೆಯನ್ನು । ಆಡುತ್ತಾಡುತ್ತ ಬಂದ ರಾಗ ॥ ಆಡುತ್ತ ಮೃಗಗಳನೋಡಿಸುತೋಡಿಸು । ತ್ತಾಡಿ ವನದೊಳುರೆ ಮಾಡುತ ಬೊಬ್ಬೆಯ ॥ ೧ ॥ ಕತ್ತಿಗಳನೆ ತಿರುಹುತ್ತ । ಜಾಲಗಳನ್ನೆ । ಎತ್ತಿ ನಾಲ್ದೆಸೆಯೊಳು ಬೀಸುತ್ತ ॥ ಮತ್ತೆ ಕೊಲ್ಲು ಹೊಯ್ ಹುತ್ತವನಿರಿ ನೋ । ಡಿತ್ತಲೋಡುವುದ ಮುತ್ತು ಬಿಡದಿರೆನು ॥ ತ್ತಾಡುತ್ತಾಡುತ್ತ ॥ ೨ ॥

ಭಾಮಿನಿ

ಕಿಟವ ಕಂಡುರೆ ಮನದೊಳೊಗೆದು । ಬ್ಬಟೆಯು ಮಿಗಿಲಾಂತುದು ಧರಾಧಿಪ । ಮಿಟಮಿಟಿಸುವರ ನೂಕಿ ಪಿಂದಿಕ್ಕುವರ ಮಿಗೆ ಜರೆದು ॥ ದಿಟತನದಿ ಬೆಂಬತ್ತಿ ನಡೆಯಲ್ । ಕಟಕವೇರೆ ಪದಾಂಬುಜವ ಲಟ । ಕಟಿಸಿ ಕಂಪಿಸಿ ಧೊಪ್ಪನೊರಗಿದ ಭೂಪನವನಿಯಲಿ ॥ ೧ ॥

ರಾಗ ಮಧ್ಯಮಾವತಿ ತ್ರಿವುಡೆತಾಳ

ಇತ್ತ ಕೇಳೈ ನೃಪನ ಕಾಲೊಳು । ನೆತ್ತರೊಸರಲು ವೇದನೆಗೆ ಮೈ । ಯಿತ್ತು ಮರುಗುವ ಸ್ಮೃತಿವಿರಹಿತನ । ಹೊತ್ತು ತರೆ ಬೊಮ್ಮಯ್ಯನ । ಮಂದಿರಕ್ಕೆ ॥ ॥ ೧ ॥ ಕಂಡು ವಿಸ್ಮಯಗೊಳುತ ಬೊಮ್ಮಯ । ಮಂಡೆಯನು ಪಿಡಿದೆತ್ತಿ ನರಪನ । ಚಂಡಬಲ ನಿನಗೇನೊದಗಿತ್ತೈ । ಮಂಡಲಾಧಿಪನೇಳು ನೀ । ಮರುಗ ಬೇಡೈ ॥ ೨ ॥ ತಾಳಲಾರೆನು ಬೊಮ್ಮ ಕಾಲೊಳು । ಕೀಲಿಸಿಹುದೊಂದಂಬು ವೇದನೆ । ಮೇಲೆ ಬರ್ಪುದು ಜೀವ ಪಿಡಿಯುತ । ಬಾಳಲಾರೆನು ಬೀಡಿಗೆ । ಕೊಂಡು ತೆರಳೈ ॥ ೩ ॥

ಭಾಮಿನಿ

ತರಣಿಯುದಯದ ಮುನ್ನ ಭೂಪನ । ನಿರಿಸಿ ಮಂಚದೊಳಾಗ ಭೃತ್ಯರು । ಚರರು ಪೆಗಲೊಳಗೇರಿಸುತ ಕೊಂಡೊಯ್ಯೆ ಮಡುಮಲೆಗೆ ॥ ಪರಿಕಿಸುತಲೆಲ್ಲ ವರು ಗೋಳಿಂ । ದೊರಲೆ ಮೆಲ್ಲನೆ ಪಿಡಿದು ಹಾಸಿನೊ । ಳಿರಿಸುತುಪಚರಿಸುತ್ತ ಲಿರೆ ತುಳುರಾಜಕುಲಮಣಿಯು ॥ ೧ ॥

ರಾಗ ಉಮಾಭರಣ ಅಷ್ಟತಾಳ

ಎಂತಾದರು ಮಾಡಯ್ಯ । ಬೊಮ್ಮಯ್ಯ । ಎಂತಾದರು ಮಾಡಯ್ಯ ॥ ಎಂತಾದರು ಮಾಡು । ಇಂತಹಾಪತ್ತಿನೊಳ್ । ಅಂತ್ಯಕಾಲವೆನಗೆಂತು ತಾಳಲಿ ನಾ ॥ ೧ ॥ ಮಂತ್ರದಿ ಮಾಣಿಸಯ್ಯ । ಕಾಲೊಳಗಿದ್ದ । ಕಂಟಕ ಕೀಳಿಸಯ್ಯ ॥ ಇಂತಹ ಸುದ್ದಿಯನೆನ್ನ ಭೃತ್ಯರೊಳೆಲ್ಲ । ಮುಂತೆ ನೀ ಕಳುಹು ವೈದ್ಯರ ಬರ ಹೇಳಯ್ಯ ॥ ೨ ॥ ಅಮ್ಮಣ್ಣ ಬೈದ್ಯನೆಲ್ಲಿ । ಹಾಕಿಸು ಮದ್ದ । ಬೊಮ್ಮಯ್ಯ ನಡುವಿನಲ್ಲಿ ॥ ಬಿಮ್ಮನೆ ಕಟ್ಟಿಕೊಂಡಿದೆ ನೋವು ಎದೆಯೊಳು । ಜುಮ್ಮೆನ್ನುತಿದೆ ಉರಿ ತಾಪ ಕಾಲೊಳಗಿಂದ ॥ ೩ ॥ ಅಹುದು ದೇವಿಯು ಬಲ್ಲಳು । ಮುಳ್ಳಿಗೆ ಮದ್ದ । ಬಹು ಸೊಗಸಿನೊಳೀವಳು ॥ ಇವಳು ಗರ್ಭಿಣಿ ಕಾಂತನಿಹ ಬಿಟ್ಟೆರಡೆ ಮಾಸ । ಗೃಹ ಬಿಟ್ಟು ಬಾರಳೆಂದೆನುತಿರ್ದರೆಲ್ಲರು ॥ ೪ ॥ ಪೋಗಿ ನಾ ಪೇಳ್ದೆ ನೆನ್ನಿ । ಈ ಪರಿಭವ । ದಾಗಮುವರುಹಿ ಬನ್ನಿ ॥ ನಾಗವೇಣಿಯು ಎನಗಾಗಿ ದಂಡಿಗೆಯೇರಿ । ಬೇಗ ಬರಲಿ ಪ್ರಾಣ ಹೋಗುವುದಕೆ ಮುನ್ನ ॥ ೫ ॥

ರಾಗ ಕೇದಾರಗೌಳ ಝಂಪೆತಾಳ

ನುಡಿಯನಾಲಿಸುತ ಚರರು । ದೇವಿಗೃಹ । ಹುಡುಕಿ ಬಾಗಿಲೊಳಗವರು ॥ ಒಡನೆ ದಂಡಿಗೆಯನಿರಿಸಿ । ಕರೆಯಲ್ಕೆ । ನುಡಿದಳಾ ಕಾಂತನರಸಿ ॥ ೧ ॥ ಯಾರಯ್ಯ ನೀವಿಲ್ಲಿಗೆ । ಬಂದಿರುವ । ಕಾರಣವಿದೇನು ನಿಮಗೆ ॥ ಯಾರೊಡನೆ ಕಾರ್ಯವಿಹುದು । ಅರುಹಿರೆನ । ಲೋರ್ವನಿಂತೆಂದ ಮಣಿದು ॥ ೨ ॥ ನಮ್ಮೊಡೆಯ ಬಲ್ಲಾಳರ । ಪಾದದೊಳು । ಹೊಮ್ಮಿಹುದು ಮುಳ್ಳು ಬೇರ ॥ ಅಮ್ಮ ನಿನ್ನೌಷಧಿಯನು । ಬಯಸುತಿಹ । ರೆಮ್ಮವರು ಬಹುದು ನೀನು ॥ ೩ ॥ ಕೊಟ್ಟರೇ ನಿಮಗಾಜ್ಞೆಯು । ಕರೆತರಲಿ । ಕಟ್ಟಿದರೆ ಈ ಬಸಿರಿಯು ॥ ಸೃಷ್ಟಿ ಪಾಲಕನ ನುಡಿಗೆ । ಎರಡಿಲ್ಲ । ನೆಟ್ಟನೇ ಬಹೆನು ಹೀಗೆ ॥ ೪ ॥ ಭರದಿ ದಂಡಿಗೆ ಯೊಳಿಡುತ । ಮದ್ದುಗಳ । ನಿರದೆ ಹರಕೆಯುವೆಸಗುತ ॥ ಬರಲು ದೇವಿಯ ಕಾಣುತ । ಪೆರುಮಳಗೆ । ಹರುಷ ಮಿಗೆ ನುಡಿದನಾತ ॥ ೫ ॥ ದೇಯಿ ಬಾರಮ್ಮ

ಇತ್ತ । ಹಿಂದೆನ್ನ । ತಾಯಿ ಬಸಿರಿಂದ ಪೆತ್ತ ॥ ಕಾಯವಿದನುಳಿಸು ನೊಂದೆ । ನೀನೆನಗೆ । ತಾಯಿ ಎಂದೆನಿಸು ಮುಂದೆ ॥ ೬ ॥

ರಾಗ ಕಾಂಭೋಜಿ ಝಂಪೆತಾಳ

ರೂಢಿಪಾಲಕ ಕೇಳು ನಿನ್ನಯ । ಪಾಡ ತಿಳಿಯಲು ಬಂದೆನಾದರೆ । ಮಾಡಲೆಂತೈ ಮನವ ಬರೆ ತವ । ಬೀಡಿನೊಳಗೆ ॥ ೧ ॥ ಪುಟ್ಟಿದೆನು ಬಿಲ್ಲವರೊಳನ್ಯರ। ದಿಟ್ಟಿಸದ ತೆರನಾಯ್ತು ಬಸಿರಿಯು । ಬಿಟ್ಟೆ ಕಾಂತನ ಬರಲು ಮುಂದೇಂ । ಬಟ್ಟೆಯರುಹು ॥ ೨ ॥ ಕಂಜದಳಲೋಚನೆ ಸುಗುಣೆ ನೀ । ನಂಜದಿರು ಬಾರಿತ್ತ ಸೌಖ್ಯದ । ಪಂಜರದೊಳಿರಿಸೆನ್ನ ಪ್ರಾಣವ । ಮಂಜುಳಾಂಗಿ ॥ ೩ ॥ ಅನ್ಯರೀಕ್ಷಿಸದಂತೆ ವಿರಚಿಸಿ । ದುನ್ನತದ ಮಂದಿರವ ಪೊಗು ಸಂ । ಪನ್ನೆ ರಕ್ಷಿಸು ವೇದನೆಯ ನಾ । ನೆನ್ನಲೆಂತು ॥ ೪ ॥

ರಾಗ ಮುಖಾರಿ ಆದಿತಾಳ

ಅತ್ತು ಮರುಗಿ ಬೇಡುತಿರುವ ಭೂಪನನ್ನು । ಕಾಣು । ತಿತ್ತು ಧೈರ್ಯ ತೆಗೆದು ತಂದ ಮದ್ದ ತಾನು ॥ ಹತ್ತಿರದೊಳಿರ್ದು ಗಾಯ ತೊಳೆದು ಕೀವು । ಕೈಯಿಂ । ದೊತ್ತಿ ತೆಗೆದು ಹತ್ತಿಸಲ್ಕೆ ಇರ್ದ ನೋವು ॥ ೧ ॥ ಗಳಿಗೆಯಿಂದ ಗಳಿಗೆ ಗಾಯ ಮಾಸಲಾಗ । ಭೂಪ । ಬಲದೊಳೆದ್ದು ನಡೆದು ಬರುವಂತಿರ್ದನಾಗ ॥ ಬಳಲಿದ ದೇವಿಯು ಕರೆದು ತಂದು ಬೇಗ । ಮಾನ । ಗಳನೆ ಮಾಡಿ ಸಂತಸದೊಳಿರ್ದನಾಗ ॥ ೨ ॥ ಇಂದಿನ ಮರ್ಯಾದೆಯೆಲ್ಲ ಸಂದಿತಯ್ಯ । ಎನ್ನ । ಮುಂದಿನ ಮಕ್ಕಳಿಗೇನನೀವೆಯಯ್ಯ ॥ ಎಂದ ನುಡಿಗೆ ಪೆರುಮಳಾಖ್ಯನೆಂದ ಮಕ್ಕಳ್ । ಬೇಡಿ । ದಂದವನೀಯೆ ಸಂಶಯ ಬೇಡವಕ್ಕ ॥ ೩ ॥

ವಾರ್ಧಿಕ

ಒರೆವೆನಾಲಿಸಿರಿತ್ತ ಪೆರುಮಳಾಖ್ಯನು ದೇವಿ । ಗಿರದೆ ಸಂಭ್ರಮದೊಳುಪಚರಿಸುತುಡುಗೊರೆಯಿತ್ತು । ಉರುತರದ ಭಕ್ಷ್ಯಭೋಜ್ಯಾದಿಗಳ ರಚಿಸಿ ಬಯಕೆಯ ನೀಡಿ ಸಂತಸದಲಿ ॥ ಇರುತಿರಲು ದಿನವೆರಡರೊಳು ದೇವಿ ರವಿಶಶಿಯ । ನಿರದೆ ಮಿಗಿಲೆನಿಪ ಕುವರರನೀರ್ವರಂ ಪಡೆದು । ಹರುಷದೊಳಗಿರಲಂತರವನರಿತು ಭೂಪಾಲ ಪರಮ ಸಂತಸದೊಳಿರ್ದ ॥ ೧ ॥

ಭಾಮಿನಿ

ಆಯುತದಿ ಹದಿನೆರಡು ದಿನಗಳೆ । ದಾಯುತವನರಿತಾಗ ಪೆರುಮಳ । ರಾಯಯೋಚಿಸಿ ಜಾತಕರ್ಮವನೆಸಗಿ ಬಾಲರಿಗೆ ॥ ದೇವ ಕೋಟೀಶ್ವರನೆ ಚೆನ್ನಿಗ ।

ರಾಯನೇ ಗತಿಯೆಂದು ಕರೆದನು । ಆಯುತದ ಪೆಸರಿಂದ ಪ್ರಿಯದೊಳು
ಕೋಟಿಚೆನ್ನಯರ ॥ ೧ ॥

ಕಂದ

ಸರಸಿಜಸಖನಸ್ತಮಿಸಲ್ । ಸರಸಿಜಮುಖಿಯರು ಕುವರಾರರೀರ್ವರ
ತೊಟ್ಟಿಲೊ ॥ ಳಿರಿಸುತೆ ತೂಗುತ ಪಾಡುವ । ಪರಿತೋಷವ ಕೇಳೊರೆವೆನು
ನರಕುಲತಿಲಕ ॥ ೧ ॥

ರಾಗ ಭೈರವಿ ಅಷ್ಟತಾಳ

ತೂಗಿರೆ ಬಾಲರ ಜೋಗುಳ ಪಾಡಿ । ತೂಗಿರೆಯಂಬಾಭವಾನಿಯ ಬೇಡಿ ॥
ತೂಗಿರೆ ಗೋಪಾಲಕೃಷ್ಣನ ಪಾಡಿ । ತೂಗಿರೆ ಪ್ರಾಣದೇವನ ಕೊಂಡಾಡಿ ॥
ಜೋ ಜೋ ॥ ೧ ॥ ಜೋ ಜೋ ಮಾರ್ತಂಡತೇಜ ಶುಭಾಂಗ । ಜೋ ಜೋ
ಹಿಮಕರಾನನ ಸುಭದ್ರಾಂಗ ॥ ಜೋ ಜೋ ಕೀರ್ತಿವರ್ಧನ ದೇವಿಕಂದ । ಜೋ
ಜೋ ಪೊರೆ ಕರುಣದಿ ಗೋಪಿನಂದ ॥ ಜೋ ಜೋ ॥ ೨ ॥ ಬಲ್ಲಿದ ಬಲವಂತ
ನಾಗಿ ಓಡ್ಯಾಡು । ಬಿಲ್ಲರ ಕುಲಕೀರ್ತಿಗಳನೆ ಕೊಂಡಾಡು ॥ ಚೆಲ್ವಾಂಗ ಸುಂದರ
ಶುಭಕರನಾಗು । ಬಿಲ್ಲಾಳುಗಳನೆಲ್ಲ ಮಿಗಿಸುವನಾಗು ॥ ಜೋ ಜೋ ॥ ೩ ॥

ರಾಗ ಧನ್ಯಾಸಿ ಆದಿತಾಳ

ಬಿತ್ತರಿಸುವೆನೆಂತು । ದೇವಿಯು । ಸತ್ತಳೆಂಬುದಿಂತು ॥ ತತ್ಸುಕುಮಾರರು
ಶುಕ್ಲಚಂದಿರನ । ತತ್ಸಮ ಬೆಳೆದರು ಮತ್ತಾ ನೃಪನೊಳು ॥ ೧ ॥ ವಿದ್ಯೆ ಬುದ್ಧಿ
ಪೇಳಿ । ಸಾಯಿನ । ಬೈದ್ಯನ ಬರಹೇಳಿ ॥ ಮುದ್ದು ಕುಮಾರರ ಕಯ್ಯೊಳಿತ್ತು
ಬೇ । ಕಿದ್ದುದನೆಲ್ಲವನಿತ್ತು ಕಳುಹಿದನು ॥ ೨ ॥ ಇಂತಾ ಬಾಲಕರು । ಬೆಳೆದರು ।
ಸಂತಸದಿಂದವರು ॥ ಮುಂತೆ ಕೇಳ್ ಚಿಣಿಕೋಲ್ ಚೆಂಡಾಟವ । ನಂತಬಾಲ
ರೊಡನಾಡಿ ಜಯಿಸುವರು ॥ ೩ ॥

ಭಾಮಿನಿ

ಕೇಳಿರಿತ್ತಲು ಬಾಲರೊಂದಿನ । ಲೀಲೆಯೊಳು ನಡೆತಂದು ತರಳರ । ಮೇಳ
ದಲಿ ಚೆಂಡಾಟವಾಡುತ್ತಿರಲು ಮನದಣಿಯೆ ॥ ಖೂಳ ಸಚಿವ ಕುಮಾರರೈತರೆ ।
ಪೇಳಿದನು ಸಹಜಾತನಣ್ಣಗೆ । ತಾಳು ಮಿಣ್ಣಗೆ ಬಹ ಕುಬುದ್ಧಿ ಜರಿವರ ನೋಡ
ನುತ ॥ ೧ ॥

ರಾಗ ಭೈರವಿ ಆದಿತಾಳ

ಅಣ್ಣ ನೋಡು ಬರುವರಿವರು ಸಣ್ಣ ಪೋರರು । ನಿನ್ನೆ ಜಗಳವಾಡಿದಂತ
ಬಣ್ಣಗಾರರು ॥ ಮಿಣ್ಣನಿರ್ಪ ಮಂತ್ರಿಕುವರರನ್ನು ಕರೆಯುವ । ಬಣ್ಣದ ಚೆಂಡಾಟ

ವಾದಿ ಕೀರ್ತಿ ಪಡೆಯುವ ॥ ೧ ॥ ಎನಲು ಕೇಳ್ದು ಕೋಟಿ ಹರುಷ ತಾಳ್ದು ಕರೆದನು । ಮನದಿ ಧೈರ್ಯವಾಂತು ಚೆಂಡನಾಡಿರೆಂದನು ॥ ಬಿನುಗು ಮಂತ್ರಿತರಳರ್ ನೀವು ಬಲ್ಪಿನಿಂದಲಿ । ಅನುವನರಿಯದೀಗ ಸೋತು ಮನೆಗೆ ತೆರಳಿರಿ ॥೨॥ ಸೆಣಸಲಾರದಂತ ಬಾಲರ್ ನೆಪವ ತೆಗೆದರು । ಕಣನ ಬಾಡಿಗೆಯನು ಕೊಟ್ಟು ಪೋಪುದೆಂದರು ॥ ಎಂದ ಮಾತ ಕೇಳ್ದು ಕೋಪದಿಂದ ಚೆನ್ನಯ । ಬಂದು ಚೆಂಡ ಕಸಿದು ನೂಕಿ ಪೋಗಿ ನಿಮ್ಮಯ ॥ ೩ ॥ ತಂದೆ ಮಂತ್ರಿವರಗೆ ಪೇಳಿರಿದರ ಬಗೆಯನು । ಚೆಂಡ ಕೊಡುವರಲ್ಲ ನಾವು ಬರಲಿಯಾತನು ॥ ಎಂದು ನೂಕುತವರ ವೀರಕುವರರೀರ್ವರು । ಒಂದೆ ಬುದ್ಧಿಯಿಂದಲಾಟವಾಡುತಿರ್ದರು ॥ ೪ ॥

ರಾಗ ನೀಲಾಂಬರಿ ತ್ರಿವುಡೆತಾಳ

ಸೆಣಸಿನೊಳು ಜಯವಿಲ್ಲದಿರೆ ಕಾ । ಲ್ಮಣೆಸಿ ಬಹ ಮಕ್ಕಳನು ದುರ್ಗುಣಿ । ತಣಿಸಿ ಮುದ್ದಿಸುತಪ್ಪಿ ಕೇಳ್ದನು । ಎಣಿಕೆಯೇನ್ನೈ ॥ ೧ ॥ ಎಳೆದಳಿರನಯನಂಗಳೀತೆರ । ಬಳಲಿತೇನ್ನೈ ಜಲದ ಧಾರೆಯು । ಇಳಿಯುತಿದೆ ಮೈಯುಡುಗಿದೀ ಪರಿ । ತಿಳುಹಿರೆನಗೆ ॥ ೨ ॥ ತಾತ ಲಾಲಿಸು ಬಿಲ್ಲಕುವರರು । ನೀತಿಯರಿಯದೆ ಬೈದು ಭಂಗಿಸಿ । ಸೋತವರು ನೀವೆಂದು ದೂಡಿದ । ರೀತಿ ನೋಡೈ ॥ ೩ ॥ ಚೆಂಡ ನೊಯ್ದರು ಕೊಡಹಿ ಕಯ್ಯನು । ಪುಂಡರೀರ್ವರು ದಿಂಡರಿಹರಾ । ಭಂಡ ಮಂತ್ರಿಗೆ ಪೇಳಿರೆನುತಲಿ । ದಂಡಿಸಿದರು ॥ ೪ ॥ ಕೇಳ್ದು ಕನಲಿದ ಮಂತ್ರಿ ಧರೆಯೊಳು । ಬಾಳ್ವಪರೆ ಬಲು ದುಷ್ಟ ಕುವರರು । ತಾಳ್ದಪೆನೆ ನಾನಿದನು ಬುದ್ಧಿಯ । ಪೇಳ್ದರಿವೆನು ॥ ೫ ॥ ತಂದವೆರಡಾದರೆಯು ಬಂಟರ । ದೊಂದು ಬಿಲ್ಲರ ತೊತ್ತು ಮೂಳಿಯು । ದಂಡಿಸದೆ ನಾನುಳಿದೆನಾದರೆ । ಗಂಡುಸಲ್ಲ ॥ ೬ ॥ ಚಿಕ್ಕ ಪೋರರು ಚೆಕ್ಕಿಸಂದದಿ । ಮಕ್ಕಳನು ಸಿಕ್ಕಲ್ಲಿ ತರಿವರು । ಮಿಕ್ಕಿದರೆ ಬಲು ಕಷ್ಟ ತುಂಟರ । ಲೆಕ್ಕಿಸುವೆನೆ ॥ ೭ ॥ ಪೆರುಮಳಾಖ್ಯಗೆ ಮಂತ್ರಿಯೆಂಬುದ । ನರಿಯರೇ ತೊತ್ತಿಗರ ಸರಿಸಕೆ । ತೆರಳಿ ನುಡಿಸುವೆನೆಂದು ತಾನತಿ । ಭರದಿ ಪೊರಟ ॥ ೮ ॥

ರಾಗ ಕಲ್ಯಾಣಿ ಮಟ್ಟೆತಾಳ

ವೀರ ಸಚಿವ ಕೋಪದಿಂದ । ದಾರಿ ತಡೆದು ನುಡಿದನೆಲವೊ । ಪೋರರಿನಿತು ನಿಮಗಿದೂ । ಕಾರ ಬಂದುದೆ ॥ ೧ ॥ ಅಂಕೆಯಿಲ್ಲದನ್ಯರನ್ನು । ಬಿಂಕತನದಿ ನೋಯಿಸಲ್ಕೆ । ಮಂಕುಗಳಿರ ಬಿಡದೆ ನಿಮ್ಮ । ಟೊಂಕ ಹೊಯ್ವುವೆ ॥ ೨ ॥ ಯಾರೆಲಾ ಮದಾಂಧನಂತೆ । ಪೋರರೆಂದು ಜರೆದು ನುಡಿವ । ಭೂರಿ ಕೊಬ್ಬಿನವನು ಬಲ್ಲೆ । ಸಾರು ಜತನದಿ ॥ ೩ ॥ ಮಕ್ಕಳೊಳಗೆ ಜಗಳವಾಗೆ । ಮಕ್ಕಳಂತೆ ಬಂದು ಕೇಳ್ವೆ । ಸೊಕ್ಕಿದವನು ಸೊಲ್ಲಗುತಿಹರು । ಮಿಕ್ಕಿಪೋದರೆ ॥ ೪ ॥ ಬಿಡು

ಬಿಡೆಲವೊ ನಿಮ್ಮ ನ್ಯಾಯು । ನಡತೆ ಬಲ್ಲೆನೆಂದು ಕಣ್ಣ । ಕಿಡಿಯು ಸೂಸಿ ಮಂತ್ರಿ ವರ್ಯ । ಪಿಡಿದನೀರ್ವರ ॥ ೫ ॥ ಹೊಡೆದು ಬಡೆದು ಕೈಯು ತಿರುಹಿ । ಕೊಡಹಿ ಚೆಂಡ ಕಸಿದು ನೂಕಿ । ಒಡನೆ ತಿರುವಲಾಗ ಚೆನ್ನ । ನುಡಿದ ಗರ್ವದಿ ॥ ೬ ॥ ಚಿಕ್ಕ ಕರಗಳಿಂದ ನೀಸು । ಫಕ್ಕನಪಹರಿಸಿದ ಚೆಂಡ । ದಕ್ಕಗೊಡೆವು ತಿರುಗಿ ತಹೆವು । ತಕ್ಕ ಕಾಲಕೆ ॥ ೭ ॥ ಅಂದು ಮೊದಲು ಕೋಟಿಚೆನ್ನ । ರಿಂದಲಾದು ದೆರಡು ತಂಡ । ಮುಂದೆ ಬಂಟ ಬಿಲ್ಲರೊಳಗೆ । ಸಂದು ಜಗಳವು ॥ ೮ ॥

ಭಾಮಿನಿ

ಬಗೆಯುನರಿತಾ ಭೂಪನಿವರೊಳು । ಜಗಳ ತಪ್ಪದೆನುತ್ತ ನಿಲಜವ । ಜಗಳ ಗಲಿ ಮಲ್ಲಯುಗೆ ಕೊಡಿಸಿದನಿತ್ತ ನೇರಜವ ॥ ಮುಗುಳೆ ಚೆನ್ನಯರಿಂಗೆ ಸನುಮತ। ಸೊಗಯಿಸುವ ತೆರ ಗೆಯ್ಪು ಬುದ್ಧಿಯು । ಮಿಗೆ ನುಡಿದು ಕಳುಹಿದನು ಪೆರು ಮುಳನಿತ್ತ ಸಂತಸದಿ ॥ ೧ ॥

ಕಂದ

ಸಂದುದು ದಿನ ಹಲವೀ ಪರಿ । ಯಿಂದಲೆಮುಳರನುದಿನ ಸಚಿವನುಪದ್ರದೆ ಬಲು ॥ ನೊಂದರು ಬಂಟರ ಬಿಲ್ಲರ । ಸಂದೋಹವೆ ಕಾದಲಿಕೆಡೆ ಪಡುಮಲೆ ಯೊಳು ಕೇಳ್ಳೈ ॥ ೧ ॥

ರಾಗ ನೀಲಾಂಬರಿ ತ್ರಿವುಡೆತಾಳ

ಇತ್ತಲೊಂದಿನ ಕೋಟಿಚೆನ್ನಯು । ರತ್ತ ಬರೆ ಕಾಣುತ್ತ ಬಯಲು । ಬೈತ್ತಿ ತೆವರಿಯುಸೊತ್ತಿ ಜಲ ತುಳು । ಕುತ್ತಲಿಹುದ ॥ ೧ ॥ ಹರ ಹರಾ ವಿಧಿ ಕಷ್ಟ ವಾಯಿತೆ । ಬರಿದೆ ಬಳಲಿಪ ಮಂತ್ರಿ ಮಲ್ಲಯು । ಹರಿಸಗೊಡನೇ ಜಲವ ತಗ್ಗಿನೊ । ಳಿರುವುದೆಂತು ॥ ೨ ॥ ಕಾಡಿ ಬೇಡಲು ನೋಡದಿಹ ಮಾ । ತಾಡ ನಾಡಲು ಮೂಢರೆಂಬನು । ಬೀಡಿನಧಿಕಾರವೆ ಸಕಲ ಕೈ । ಗೂಡಿತೆಂದು ॥ ೩ ॥ ಇನ್ನು ಲೆಕ್ಕಿಸಲೇಕೆನುತಲಾ । ಚೆನ್ನಯುನು ತೆವರಿಯುನು ಮುಗುಚಿದ । ಮುನ್ನ ದಾರಿಯು ಗೆಯ್ದನಾ ಜಲ । ಕುನ್ನತದಲಿ ॥ ೪ ॥ ಕಂಡು ಕನಲಿದ ಮಂತ್ರಿ ಮುಲ್ಲಯು । ದಿಂಡ ಬಾಲರ ಕಾರ್ಯ ಜಗದೊಳು । ಪುಂಡತನ ಕಾಲೊತ್ತಿ ಜಗ ಳವ । ಕಂಡು ಹದನ ॥ ೫ ॥

ರಾಗ ಬೇಗಡೆ ಏಕತಾಳ

ಛಲವೇ । ಕಡು ಖಳ ಬಾಲರಿಗೀ । ಛಲವೇ ॥ ಪ ॥ ಕಲಿ ಪೆರುಮುಳನೊಡ । ಬಲಗೈ ಭಟನೊಳು । ಸಲೆ ಪೆರ್ಚಿದ ದು । ರ್ಬಲರಿಂಗೀ ಪರಿ ॥ ಛಲವೇ ॥ ಅ ॥ ಮೋಡಿ ತೋರ್ದಪರು ಮೂಢರೆನ್ನೊಡನೆ । ಕಾಡುತಿಹರು ದೂರ । ಭೂಪಗೆ । ಚಾಡಿ ನುಡಿದು ತಲೆಯಾಡಿಪ ಬಲ್ಬಗೆ। ಮಾಡುತಿಹರು ಪೂರ ॥ ಈ ಪರಿ । ಮಾಡ

ೀಡಿರೆಂದಾಡಲು ತೆವರಿಸಿ । ಝಾಡಿಸುವರು ನೀರ । ಬಯಲೊಳು । ಕೋಡಿ
ರಿಯುತಿದೆ ನೋಡಿ ಸಹಿಸೆ ನಾ । ನೀಡುವೆ ಪ್ರತಿಕಾರ ॥ ಖಳರಿಗೆ ॥ ಭಲವೇ ॥

ರಾಗ ಹರಿಕಾಂಭೋಜಿ ಮಟ್ಟೆತಾಳ

ಏನೆಲಾ ಮದಾಂಧ ಕೋಟಿ । ಹೀನನಂತೆ ಜಲದಿ ಬಯಲ । ಹಾನಿಗೆಯ್ವೆ
ನ್ನೊಳಿಹ ನಿ । ಧಾನವೇನೆಲಾ ॥ ೧ ॥ ಸ್ವಾಮಿ ನೀವು ಶ್ರೇಷ್ಠಕುಲದ । ಮಾನ
ವಂತರೆಂದು ನಾವು । ಸಾಮದಿಂದ ಬೇಡಿದಾಗ । ಲೇನನೆಂದಿರಿ ॥ ೨ ॥ ಹುಟ್ಟು
ಮೊದಲು ತಂದೆತಾಯು । ದಿಟ್ಟಿಸಿಲ್ಲ ಬಾಲ ನೀನ । ದೆಷ್ಟು ನ್ಯಾಯ ಬಲ್ಲೆ
ಹೇಳು । ಹೊಟ್ಟು ಬಿಲ್ಲನೆ ॥ ೩ ॥ ನಿಮ್ಮ ನುಡಿಯ ಕೇಳ್ದು ನಾನು ।ಸಮ್ಮನಿರ್ಪೆ
ನಾದರೆನ್ನ । ತಮ್ಮನೊಡನೆ ನಡೆಯದಿಂಥ ॥ ಹಮ್ಮ ತೋರಲು ॥ ೪ ॥ ಬಿಡು
ಬಿಡೆಲವೊ ಕೊಬ್ಬುತನದ । ನುಡಿಯ ನಿನ್ನ ತಮ್ಮ ಭೂಮಿ । ಯೊಡೆದು ಬಂದ
ನೇನು ಬಾನ । ಸಿಡಿದು ಬಂದನೊ ॥ ೫ ॥

ರಾಗ ಮುಖಾರಿ ರೂಪಕತಾಳ

ಮರುಳು ಮದಾಂಧನನಳುಕಿಸೆ । ಹರಿಚರಣಜ ಪೃಥ್ವೀಜರು । ಬರಲೇತಕೆ
ಶರಣವ ಕೊಂ । ಬುರವಣೆಯಲಿ ಜವದಿ ॥ ೧ ॥ ಪೂತುರೆ ವಿಕ್ರಮಿ ಬಲದಿ ಮ ।
ಹಾತಿಶಯದ ಕೊಬ್ಬಿನ ಪರಿ । ನೀ ತಪ್ಪದೆ ನೋಡೈ ಬಲು । ಪಾತಕಿ ಗುರು
ರೂಪಕಿ ॥ ೨ ॥ ನುಡಿದೀ ಪರಿಯೊಳು ಚೆನ್ನಯ । ಸಿಡಿದಬ್ಬರವನು ಕಂಡುರೆ ।
ನಡುಗಿದ ಮಲ್ಲಯ ನಿಲ್ಲದೆ । ಬಿಡದೋಡಿದನಾಗ ॥ ೩ ॥ ಓಡುವ ಮಂತ್ರಿಯ
ಹಿಡಿದನು । ಝಾಡಿಸಿಯೊದೆದನು ಬೆನ್ನನು । ಜೋಡಿಸಿ ಮುರಿದನು ಖಡುಗದಿ।
ಓಡಿದ ಬಿಸಿಗರುಳ ॥ ೪ ॥ ಎಲವೆಲವೋ ಪಾತಕಿ ನೀ । ಮಲಗಿಲ್ಲೆನುತಲೆ ಸಚಿ
ವನ । ನಿಲಯುವ ಸೇರ್ದಿ ಹದನವ । ತಿಳುಹಲು ಕಾಂತೆಯೊಳು ॥ ೫ ॥ ಹರ
ಪರ ಕೊಂದಿರೆ ಎನ್ನಯ । ಪುರುಷನ ಧರೆಯೊಳು ಮುಂದಿ । ನ್ನಿರೆ ಕಾಂತನ
ತೊರೆದೆನ್ನುತ । ಉರೆ ಶೋಕಿಸಲಾಗ ॥೬॥ ಜಡಜಾಕ್ಷಿಯು ಶೋಕಿಸುತಿರೆ । ಕಡು
ಗಲಿ ಚೆನ್ನಯ ಚೆಂಡನು । ಬಿಡದಾ ಕ್ಷಣ ತರಲೀರ್ವರು । ನಡೆದರು ನಿಜಗೃಹಕೆ ॥

ಭಾಮಿನಿ

ತರಪರಿಸುತಬುಜಾಕ್ಷಿ ಕಾಂತನ । ಪೊರೆಗೆ ತರಳರ ಸಹಿತ ನಡೆತಂ । ದುರು
ತರದ ಮೋಪದೊಳು ಮೃತ್ತಿಕೆ ಪೊತ್ತು ಮಲಗಿರುವ ॥ ಪುರುಷರತ್ನನ ಕಂಡು
ದುಮ್ಮಲ । ಮರುಗಿ ಶಿರ ತಾಟಾಡಿಸುತ ಕರ । ವೆರಡರಿಂದಲಿ ಪೆಣನ ಮುದ್ದಿಸಿ
ಶೋಕಿಸಿದಳಾಗ ॥ ೧ ॥

ರಾಗ ನೀಲಾಂಬರಿ ಏಕತಾಳ

ಹರ ಹರೀ ವಿಧಿಯಾಯಿತೆ । ಮುಂದಿನ್ನು ಬಾಳ್ವ । ಪರಿಗಳೆಲ್ಲವು ಹೋಯಿತೆ॥ ಪುರುಷರತ್ನನೆ ನಿನ್ನನು । ಬಿಟ್ಟಿರಲೆಂತು । ಧರೆಯೊಳಗರುಹು ನೀನು ॥ ೧ ॥ ಬೇಡವೆಂದರೆ ಕೇಳದೆ । ಬಿಲ್ಲರ ಮಾಯಾ । ಮೋಡಿಜಾಲಕೆ ಸಿಕ್ಕಿದೆ ॥ ನೋಡಿ ಸಂಧಿಯನಯ್ಯಯ್ಯೊ । ಕಣ್ಣಿಗೆ ಹಬ್ಬ । ಮಾಡಿ ತೀರ್ಚಿದರಲ್ಲಯ್ಯೊ ॥ ೨ ॥ ಚಿಕ್ಕ ಪ್ರಾಯದ ಬಾಲರ । ಬಿಟ್ಟೆಂತು ಸ್ವರ್ಗ । ಪೊಕ್ಕುವರೇನು ನೀರ ॥ ಮಕ್ಕಳಿಗೊರೆ ಬುದ್ಧಿಯ । ನಯ್ಯಯ್ಯೊ ಬಿದ್ದು । ದುಃಖಿಪರಲ್ಲೊ ನೋಡಯ್ಯ ॥ ೩ ॥ ಧೊರೆ ಗೆಂತು ಹಿತವಾಯಿತೆ । ಮಂತ್ರಿಯ ವಧೆ । ಸಿರಿಯಾಸನವು ಕಂದಿತೆ ॥ ದುರುಳ ರಿಗರ್ತಿಯಾಯಿತೆ । ಕೊಲ್ಲುಲು ಎನ್ನ । ಇರವೆ ಸರಿದು ಹೋಯಿತೆ ॥ ೪ ॥ ಕಂದ ನಿನ್ನಯ ತಾತನ । ಕಾಣುವ ಯೋಗ । ಸಂದಿತಯ್ಯಯ್ಯೊ ಹದನ ॥ ಇಂದಿನ್ನಾ ರೊಳು ಪೇಳಲಿ । ಕಣ್ಣಾರೆ ಕಂಡು । ಮುಂದೆ ನಾನೆಂತು ಬಾಳಲಿ ॥ ೫ ॥

ಭಾಮಿನಿ

ದುಃಖಕಾನತೆಯಾಗುತುಡುಮುಖಿ । ಮಕ್ಕಳನು ತೆಗೆದೆತ್ತಿ ತನ್ನಯ । ಪಕ್ಕ ದೊಳು ಪಡುಮಲೆಯ ನೃಪನೋಲಗಕೆ ನಡೆತಂದು ॥ ಉಕ್ಕಿ ಬಹ ಕಣ್ಣೀರಿನಲಿ ಬಲು । ಚಿಕ್ಕವರ ಪದದೊಳು ಕೆಡಹಿ ಹರಿ । ದಿಕ್ಕಿ ಮಂಗಲಸೂತ್ರ ಗೋಳೆನು ತಾಗ ಹಲುಬಿದಳು ॥ ೧ ॥

ರಾಗ ಸಾಂಗತ್ಯ ರೂಪಕತಾಳ

ಚರಣಾಬ್ಜದೆಡೆಯೊಳು ಪೊರಳುವನಾಥೆಯು । ತರಳರ ತೆಗೆದೆತ್ತಿ ನುಡಿದ ॥ ಕರುಣಾಳು ಮರುಗದಿರವ್ವ ಈ ಪರಿಭವ । ವರುಹು ಯಾರಿಂದಲೆಂಬುವುದ ॥ ೧ ॥ ಮಂಗಲಸೂತ್ರಕೆ ಭಂಗವಾರಿಂದಾಯ್ತು । ಹಿಂಗದೆ ನುಡಿ ನಿನ್ನ ಮನದ ॥ ಇಂಗಿತವೆನಗೀಗ ಭಂಗಿಸುವೆನು ಖೂಳ । ರಿಂಗೆ ಯೋಚನೆ ತಪ್ಪಿತಿಹವ ॥ ೨ ॥ ಭೂವರೇಣ್ಯನೆ ನಮ್ಮ ಕಾವರ್ಯಾರಿಹರಿನ್ನು । ಈ ವಸುಧೆಯ ಬಿಟ್ಟ ಧವನು । ಜೀವಿಸಿಕೊಂಡಿರಲಾರೆ ರಕ್ಷಿಸು ಎನ್ನ । ಮೋಹದ ಕುವರರ ನೀನು ॥ ೩ ॥ ಇಷ್ಟು ಮಾಡಿದರಯ್ಯ ದುಷ್ಟ ಚೆನ್ನಯ ಕೋಟಿ । ಸೃಷ್ಟಿಪ ನಿನ್ನ ರಾಜ್ಯದಲಿ ॥ ಮೆಟ್ಟಿ ಮುರಿದರೆನ್ನ ಕಾಂತನ ನಿನಗಾತ । ಇಷ್ಟಸಚಿವನಾಗುತಿರಲು ॥ ೪ ॥ ಕೊಲುವರೆ ಕೊಲು ನಮ್ಮನುಳುಹುವುದಾದರೆ । ಕೊಲು ಬಿಲ್ಲಪೋರರನಿಂದೇ ॥ ಉಳಿವು ಬೇರಿಲ್ಲೆಂದು ಬಿದ್ದು ಪಾದದ ಮೇಲೆ । ಅಳುತಿರೆ ಭೂಪ ತಾನೆಂದು ॥ ೫ ॥

ಭಾಮಿನಿ

ಸಾಕಿ ಬೆಳೆಸಿದ ಲತೆಯು ಕಾಲನು । ಸೋಕಿ ಬಿಗಿದಂತಾಯ್ತು ಶಿವ ಶಿವ

ೀಕು ಬೇಡೆಂಬವರ ಕಾಣೆನು ಮಾತೆಯುಗಲಿದಳು॥ಅ ಕುವರರಿಂಗೆನುತ ಕರುಣದಿ। ೀಕಿವಕೆ ಫಲವಾಯ್ತು ಭಲರೇ । ಕೋಕಿಲಾರವೆ ಕೊಲುವೆ ಬಿಡು ಶೋಕವನು ೀನೆಂದ ॥ ೧ ॥

ವಾರ್ಧಿಕ

ದುಗುಡವನು ಬಿಡು ಮನದ ಮುಗುಳೆ ಯೋಚನೆಯೇತ । ಕಗಣಿತದ ಸತ್ತ್ವ ಾಲಿಗಳನೆಳೆತರಿಸಿಯುವ । ರಗಡುತನ ಮುರಿದಿಕ್ಕಿ ತವ ಸಂತಸವ ಕಾಂಬೆ ಮಗಳೆ ್ಯರ್ಯವನಾಂತಿರು ॥ ಜಗತಿಪತಿಯುವಳ ಸಂತವಿಸಿ ಜವದೊಳು ಭೃತ್ಯ । ರುಗಳ ೆದಟ್ಟಿ ಭಟರಂ ಕಟ್ಟಿ ತಾರೆನಲು । ಮಿಗೆ ಹರುಷದೊಳು ಪುಡುಕಲಯ್ದಲಿತ್ತಲು ೋಧರುಗಳು ಮನೆಯಂ ಸಾರ್ದರು ॥ ೧ ॥

ರಾಗ ಹರಿಕಾಂಭೋಜಿ ರೂಪಕತಾಳ

ಈ ತೆರದಲಿ ನಡೆತಂದುಗ್ರಗತಿಯೊಳು । ದಾತನ ಚರಣಕೊಂದಿಸಲು ॥ ಸೋತ ಗಳ ಬೆಮರಿಡುವರೊಡಲ ಕಂಡು । ಭೀತಿಯೊಳ್ ಸಾಯಿನ ನುಡಿದ ॥ ೧ ॥ ಲ್ಲಿ ನೋಡಿದರು ಜೋಡಿಲ್ಲ ನಿಮ್ಮಯ ಭುಜ । ಮಲ್ಲ ಸಾಹಸಕೆ ಇಂದಿನಲಿ ॥ ಲ್ಲ ಮೆಲ್ಲೆನಿಸಿ ಮಾತಿಲ್ಲದ ಬಗೆಯೆನ್ನ । ತಲ್ಲಣಗೊಳಿಪುದು ಮನವ ॥ ೨ ॥ ದೇನಯ್ಯ ದುಮ್ಮಾನವೀ ಪರಿ ಮರಿ । ಯಾನೆಗಳಿರ ಮನದಿರವ ॥ ಸಾನು ಗದಿ ನುಡಿಯೆನೆ ಕೋಟಿ ಕೈಮುಗಿ । ದಾ ನಿರೋಧವ ಬಿಸುಸುಯ್ದು ॥ ೩ ॥ ದ್ದಿವಂತನ ತಮ್ಮ ಗುದ್ದಿಕೊಂದನು ನಮ್ಮ । ಬದ್ಧವಿರೋಧಿಗಿಂದಿನಲಿ ॥ ಶುದ್ಧಿ ಾದುದು ಮುಂದೆ ಬಪ್ಪುದು ಬರಲೆಂದು । ಬಿದ್ದು ಕಾಲೊಳು ವಂದಿಸಿದನು ॥

ಭಾಮಿನಿ

ಕೊಂದಿರೇ ಪೆರುಮಳನಮಾತ್ಯನ । ತಂದಿರೇಯುವಮಾನ ಕೀರ್ತಿಯ । ಂದಿಸಿದಿರೇ ಜಲ ಗರಳವಾಯ್ತೀ ನೆಲನ ಮಾಳ್ಕೆ ॥ ಕಂದರಿರ ಕೊಲುವನು ಾಧಿಪ । ಮುಂದೆ ಲೇಸಿನ್ನೆತ್ತಣದು ಗಡ । ಬಂದುದೈ ಕಡೆಗಾಲ ನಿಮಗೆಂದೆ ತ ಮರುಗಿದನು ॥ ೧ ॥

ರಾಗ ಕಾಂಭೋಜಿ ಅಷ್ಟತಾಳ

ಘನದಿ ಶೋಕಿಸುತಿರ್ಪ ಸಾಯಿನನನು ಕಂಡು । ಮನದಿ ಧೈರ್ಯವ ಳುತ ॥ ಅನುಜ ಚೆನ್ನಯನಾಗ ಕೈಮುಗಿದೆಂದನು । ಇನಿತು ಭೀತಿಗಳೇನಯ್ಯ ॥ ೧ ॥ ದಾತ ನೀ ಲಾಲಿಸು ಫಣೆಯೊಳು ಬರೆದ ವಿ । ಧಾತನ ನೇಮದಂತೆ ॥ ತಳೇಶನು ಗೈವನಾದರೆ ಶಿಕ್ಷೆಯು । ಭೀತಿ ನಮ್ಮೊಳಗಿಲ್ಲವೈ ॥ ೨ ॥ ಎನುತಲೀ ಮುಂದ ಯೋಚಿಸುತಿರಲತ್ತ । ಘನವಹಿಲದಿ ಚರರು ॥ ವಿನಯದಿ ಬಂದು ಮುಗಿದು ಪೇಳ್ದರು ನೃಪ । ನನುವಿನಲಿ ಬರಹೇಳುವ ॥ ೩ ॥ ಕೇಳುತಾ ಕ್ಷಣ

ಸಂತವಿಟ್ಟು ಸಾಯಿನನ ಬಿ । ಲ್ಲಾಳುಗಳಾಕ್ಷಣದಿ ॥ ಲೀಲೆಯೊಳ್ ಸಡೆತಂದು ವಂದಿಸೆ ಕಂಡು ಭೂ । ಪಾಲ ಕೋಪದೊಳೆಂದನು ॥ ೪ ॥

ರಾಗ ಬೇಹಾಗ್ ಅಷ್ಟತಾಳ

ಏನೆಲಾ । ಇಂಥ । ದೇನೆಲಾ ॥ ಪ ॥ ಏನೆಲಾ ನಿಮ್ಮ ನಿಧಾನವನರಿಯೆ । ಪ್ರಾಣವ ತೆಗೆದಿರಿ ಮಂತ್ರಿಯೆಂದರಿಯೆ ॥ ಏನೆಲಾ ॥ ಅ ॥ ತಾಯಿ ತೀರಲು ನಿಮ್ಮನಾಯತದಿಂದೆ । ಕಾಯಲೀ ಪರಿಯವಮಾನವ ತಂದೆ ॥ ಮಾಯಗಾರ ರಂತೆ ಕಂಡಕಂಡವರ । ಕಾಯಕೆ ಸಂಚಕಾರವನೀಯುವಿರ ॥ ಏನೆಲಾ ॥ ೧ ॥ ಅಂದೆ ನಿಮ್ಮಯ ಕೊರಳೊತ್ತದೆ ಪೋದೆ । ಇಂದೀ ಪರಿಯೊಳು ಕಷ್ಟಕೀಡಾದೆ ॥ ಮುಂದೆ ತೀರಿತು ನಿಮ್ಮ ಬಾಳುವೆ ಬರಿದೆ । ಎಂದು ಸಹಿಸೆ ಪೂರ್ವದಿಂದ ನಾ ನುಡಿದೆ ॥ ಏನೆಲಾ ॥ ೨ ॥

ರಾಗ ಸಾವೇರಿ ಆದಿತಾಳ

ಮಾನವಾಧಿಪನೇನ ಪೇಳುವೆವು । ಹೀನ ಮಂತ್ರಿಯ ವಧೆಗಿನ್ನು ಕಾರಣವು ॥ ತಾನೆ ಬಂದನು ಬಯ್ದು ಭಂಗಿಸಿ ನಮ್ಮ । ಮಾನ ತೆಗೆಯೆ ಕೊಂದನೆನ್ನಯ ತಮ್ಮ ॥

ರಾಗ ನೀಲಾಂಬರಿ ಝಂಪೆತಾಳ

ಶಿಕ್ಷೆರಕ್ಷಾಕರ್ತನು । ತಾನಿರಲು । ಲಕ್ಷಕೆಣಿಸದೆ ನಮ್ಮನು ॥ ಶಿಕ್ಷಿಸಲು ಮಂತ್ರಿ ವರನ । ನಿಮ್ಮ ನುಡಿ । ಲಕ್ಷವಾದರು ತರಿಪೆನು ॥ ೧ ॥

ರಾಗ ಸಾವೇರಿ ಆದಿತಾಳ

ತಂದೆತಾಯಿಯನಂದೆ ತೊರೆದೆವು । ತಂದೆ ನೀನೆನುತಲಿ ಬಂದು ನಂಬಿದೆವು ॥ ಇಂದು ನೀ ಮುನಿದು ಕೊಂದರೆ ಕೇಳ್ವರ್ಯಾರು । ಕಂದರ ಕೈ ಬಿಡದುಳುಹಲು ಬೇಕು ॥ ೧ ॥

ರಾಗ ನೀಲಾಂಬರಿ ಝಂಪೆತಾಳ

ತೊದಲುನುಡಿಯಾಡಬೇಡಿ । ಮನದೊಳಗೆ । ಕುದಿಯುತಿದೆ ನೀವು ಮಾಡಿ ॥ ದದುಭುತದ ಕಾರ್ಯ ನೋಡಿ । ಬಿಡುವೆನೇ । ತುದಿಗಾಲ ಬಂತು ಖೋಡಿ ॥

ರಾಗ ಸಾವೇರಿ ಆದಿತಾಳ

ಬಂದುದೆಲ್ಲ ಬರಲಿ ಇನ್ನೇನು । ಅಂದು ನಮ್ಮಯ ಮಾತೆಗಿತ್ತ ವರವನು ॥ ಸಂದಿಸಾಡಿದ ನುಡಿಯನಂದು ಕೇಳುವೆವು । ಮುಂದಿನ ಪರಿಯನೇನೆಂದು ಪೇಳುವೆವು ॥ ೧ ॥

ರಾಗ ನೀಲಾಂಬರಿ ಝಂಪೆತಾಳ

ಅಹುದು ನಾನಿತ್ತ ವರವ । ಕೇಳಲೇ । ನಿಹುದೆಂದು ನುಡಿದು ಶಿರವ ॥ ಹವಣಿಸಿರಿ ಖಡುಗಕಿಂದೆ । ಬಾಳು ಬೇ । ರಿಹುದೆ ನಿಮಗಿನ್ನು ಮುಂದೆ ॥ ೧ ॥

ರಾಗ ಸಾವೇರಿ ಆದಿತಾಳ

ಲಾಲಿಸಯ್ಯ ಭೂಪಾಲನೆ ನಿನ್ನ । ಆಲಯುದಿದಿರ ಕೆಂದಾಳಿಯ ಮುನ್ನ ॥
ಾಲಿಸು ನಿನ್ನ ಪಟ್ಟದ ಕತ್ತಿ ರಾಣಿಯು । ರೋಲಯಿಸುವ ಉಪವನವ ಸಂಪನ್ನ ॥

ರಾಗ ನೀಲಾಂಬರಿ ಝಂಪೆತಾಳ

ಬಡವೆ ಬಗುಳದಿರು ನಿನ್ನ । ನಾಲಿಗೆಯು । ನೊಡನೆ ಕೊಯಿಸುವೆನು ಮುನ್ನ ।
ೊಡವಿಗಿದು ಚೋದ್ಯವೈಸೆ । ನಿನ್ನ ನುಡಿ । ಕಡೆಗಾಲಕಿದುವೆ ಲೇಸೆ ॥ ೧ ॥

ಭಾಮಿನಿ

ಈಸು ನೀನು ವಿಟಾಳಪಕ್ಷಾ । ವೇಶಿಯೋ ಕುತ್ಸಿತರ ನಂಬಲು । ಲೇಸಹುದೆ
ೂಪಾಲ ಪೊರೆದವನಲ್ತೆ ಭೃತ್ಯರನು॥ ಏಸು ಪರಿಯುಲಿ ಬೆಡಗುಗೊಳಿಸಿದ। ರೀಸ
ಲಿ ಮುನಿಸಿಲ್ಲವಾದೊಡೆ । ನಾಶ ನಿನಗೊದಗಲ್ಕೆ ಪಿಂದಿಕ್ಕುವರ ನಾ ಕಾಣೆ ॥೧॥

ರಾಗ ನೀಲಾಂಬರಿ ಝಂಪೆತಾಳ

ಕಂಡಿರೇ ಕಡುಗಲಿಗಳು । ಭೂತುಗಳ । ಬಂಡತನವನ್ನೀಗಳು ॥ ಉಂಡ ಮನೆ
ಳ ಗಣಿಸುವ । ದಿಂಡರನು । ಕಂಡದ್ಯಾವನು ಸಹಿಸುವ ॥ ೧ ॥ ಧೊರೆಯುಂಗ
ಣೆಯರಿಯದೆ । ಬಳಸಿರುವ । ಗರುವರನು ಬಲಗೊಳ್ಳದೆ ॥ ಪರುಷದಿಂ
ಲೆವರಿವರ । ಕೃತಗೇಡಿ । ದುರುದುಂಬಿತನಕಿಳಿದರ ॥ ೨ ॥

ರಾಗ ಬಿಲಹರಿ ತ್ರಿವುಡೆತಾಳ

ಕಡದುರವ ಸರಿದೂಗುವರೆಲಸನ್ಮಧುಕರಗೆ । ಒಡೆಯು ನಿನ್ನೀ ಭೃತ್ಯತತಿಯು ॥
ೊಡೆಯುನಣಿವೊಡಿದೇನು ಪಿರಿದೆ ಮಲವರ ಕಾಣೆ। ದುಡುಕುತನವಿಲ್ಲ ಭೂಪಾಲ॥

ರಾಗ ನೀಲಾಂಬರಿ ಝಂಪೆತಾಳ

ಕಟ್ಟಿರೆಲವೋ ಚೋರರ । ರಟ್ಟೆಯನು । ಕುಟ್ಟಿರೆಲುಗಳನು ಚೂರ ॥
ುಟ್ಟಾಳರೀ ಪೋರರು । ಇಂದಿವರ । ಬಿಟ್ಟರೆಮುಗಿದಿರು ಬಹರು ॥ ೧ ॥

ರಾಗ ಬಿಲಹರಿ ಆದಿತಾಳ

ಕಟ್ಟುವರ ಕಾಣೆನಲು ಕುಟ್ಟುವ ಕಾಣೆ ಮನ । ಮುಟ್ಟಿ ನಿಲುವರ ಕಾಣೆನಿಲ್ಲಿ ।
ಟ್ಟವನು ಭೂತುಗಳ ಪನ್ನತಿಗೆ ನಂಬಿ ಕಿವಿ । ಗೊಟ್ಟವನು ಪಡುಮಲಾಧಿಪನೆ ॥
೧ ॥ ಇಂಗಳದ ಮಳೆಗರೆದು ಭಂಗದೊಳಗಲ್ಕಾಡಿ । ಇಂಗುವೀನಾಡೆಂಬು
ುಯು ॥ ಭಂಗಪಡುತಿದೆ ಮನವು ಬೆತೆಯು ಬೇರಿನ್ನಿಲ್ಲ । ಮಂಗಳವು ನಿನ
ುತ ಪೊರಟ ॥ ೨ ॥ ಅ ... ದಾಟಿ । ಶೀಘ್ರ
ಳು ನಡೆವವರ ಕಂಡ ... ನ ನೋಡುವರ ॥
ಗ್ರಹಗಳಂತೆಸೆವ ದಂಡ ...



ಭಾಮಿನಿ

ಭ್ರಮೆಯುಗೊಂಡೆಚ್ಚತ್ತವೋಲ್ ದಿ । ಗ್ಭ್ರಮಣೆಯಾಯ್ತರಸಂಗೆ ಬಾಲಕ । ರಮಿತ ಸಾಹಸ ಕಂಡು ಮನಮರುಗಿದನು ಕೊರಗಿದನು ॥ ದಮನಗೆಯ್ಯಲು ಬೇಹುದಿವರನು । ಶಮಿಸಿಕೊಂಬೆನು ಬಪ್ಪ ಪರಿಭವ । ಕ್ರಮವರಿತು ಪಿಡಿತರಲು ಮಲ್ಲರ ಕಳುಹಿಸುವೆನೆಂದ ॥ ೧ ॥

ರಾಗ ಶಂಕರಾಭರಣ ತ್ರಿವುಡೆತಾಳ

ಇತ್ತ ಬರುತಿರೆ ಕೋಟಿ ಚೆನ್ನಯ । ರೊತ್ತಿ ಮುಂದಕೆ ರಾಮಜೋಯಿಸ । ರತ್ತ ಬರೆ ಕಾಣುತ್ತ ನುಡಿಸಿದ । ರುತ್ತಮಜರ ॥ ೧ ॥ ದೇವ ನೀನಾರೀಕ್ಷಿಸಲು ಭೂ । ದೇವನಂಡದೊಳಿರುವೆ ಕಯ್ಯೊಳು । ಪಾವನದ ವಸ್ತುಗಳಿವೇನೊರೆ । ಸೇವಕರೊಳು ॥ ೨ ॥ ತರಳರಿರ ನಾ ರಾಮಜೋಯಿಸ । ಕುರುಹನರುಹಲು ಬಲ್ಲೆ ಮುಂದಿನ । ಪರಿಯ ತಿಳುಹಲೆ ಸೈಯೆನಲು ತಾ । ನರುಹುತಿರ್ದ ॥ ೧ ॥

ರಾಗ ಕಾಂಭೋಜಿ ಅಷ್ಟತಾಳ

ಆನೆಮರಿಗಳೆರಡು । ಕಾಡನು ದಾಟಿ । ತಾನೆ ಕಲಕುತೀ ತೋಡು ॥ ತೀನಿಗೆನುತ ಕಬ್ಬ ಕಾಣಲೋಸುಗ ಬಂದು । ಏನ ಮಾಡಲೆಂಬ ಮಾನದಾನೆ ಜೋಡು ॥ ೧ ॥ ಮುಂದಿನ ಕಥೆಯು ಕೇಳಿ । ಬಡಗಿನಿಂದ । ಬಂದೀತಪಾಯ ತಾಳಿ ॥ ಇಂದು ತೆಂಕಣ ಮೊಸಳೆಯು ಕಾಟ ಪಡು ಮೂಡು । ಚಂದವಿಲ್ಲವಾನೆ ಗೆಂದು ತೋರ್ಪುದು ಕಣಿ ॥೨॥ ನೂರತೊಂಭತ್ತೊಂಭತ್ತು । ಅದರೊಳೊಂದು । ಸೇರಿದ್ದ ಬಿಡಿರೀ ಹೊತ್ತು ॥ ಏರಿಸುತ್ತ ಹತ್ತುಸುತ್ತಿ ಬೆಟ್ಟಗಳನ್ನೆ । ಸಾರಿರತ್ತ ನೀವು ಸೇರಿರೈನೂರನ್ನೆ ॥ ೩ ॥ ಜಗಳ ತೋರ್ಪುದು ಮುಂದಕೆ । ಆನೆಗಳಿಗು । ನೆಗಳೆಗು ಬಹಳ ಜೋಕೆ ॥ ಜಗಳದ ಕಥೆ ಕೇಳಾ ನೆಗಳೆ ನೆಲಕೆ ಬೀಳೆ । ಜಗದೊಳು ಕೀರ್ತಿ ಕೊಂಡಾಟ ಉಳಿವುದಯ್ಯ ॥ ೪ ॥ ಜಲಜಸಂಭವ ಕಾವನು । ಕಾಣಿಕೆ ಯನ್ನು । ಸಲಿಸಲಿಲ್ಲ್ಯಾಕೆಂಬನು ॥ ಫಳಿಲನೆ ಪೋಗಿಯಾತನ ಮೆಚ್ಚಿಸಲು ನಿಮ । ಗೊಳಿತಪ್ಪುದಿದಕೆ ಸಂಶಯವಿಲ್ಲವೆಂಬನು ॥ ೫ ॥ ಪೋಗಿಬರುವೆ ತಾನೆಂದು । ಜೋಯಿಸರತ್ತ । ಸಾಗಲಾ ತರಳರಂದು ॥ ಪೋಗಬೇಕು ಪಂಜಕೀಗಲಜನ ಕಂಡು । ರಾಗದಿಂದವನನರ್ಚಿಸಬೇಕು ಮುಂಕೊಂಡು ॥ ೬ ॥

ಭಾಮಿನಿ

ಪಾವಕೋಪಮರೀರ್ವರಾ ಭೂ । ದೇವನಾಜ್ಞೆಯ ಧರಿಸಿ ಶಿರದೊಳು । ದೇವದೇವನ ನಾಭಿಯೊಳು ಬಂದವನನರ್ಚಿಸಲು ॥ ಭಾವಶುದ್ಧದಿ ನಡೆದು ಬಂದಾ । ಕೋವಿದರು ಪೊಗೆ ಬಂಟಮಲೆಯನು । ದೇವರಿಪು ಗಜನೆಂಬ ನಿತ್ತಿದ ನರಿತು ನಡೆತಂದ ॥ ೧ ॥

ರಾಗ ಮಾರವಿ ಏಕತಾಳ

ಯಾರೋ ಬಂದವರು । ವಿಪಿನಕಿಂದು । ಯಾರೋ ಬಂದವರು ॥ ಪ ॥
ಾರವನರಿಯದೆ । ಭೂರಿ ಕೊಬ್ಬಿನೊಳಿಂದು । ಯಾರೋ ಬಂದವರು ॥ ಅ ॥
ನುನುಜರ ಮಾಂಸವನು । ಮೆಲದೆ ಬಲು । ದಿನವಾದುದಾದರಿನ್ನು ॥ ಅನುವಿಲಿ
ೊರಕಿದ । ತಿನಿಸ ಮುರಿದು ತಿಂಬೆ ॥ ಯಾರೋ ಬಂದವರು ॥ ೧ ॥

ರಾಗ ಜಂಜೂಟಿ ಆದಿತಾಳ

ಹುಲುದಾನವ ಗಳಪಿದೊಡೇಂ । ಫಲ ಬರಿದೇ ಛಲವಿದ್ದೊಡೆ । ನಿಲು
ುರದೊಳು ನಿನ್ನಸುವನು । ತೊಲಗಿಪೆ ನಾ ಜವದಿ ॥ ೧ ॥ ಬಲದೊಳು ಬಲ್ಲಿದ
ಿನ್ನಯ । ನೆಲೆ ಗಜನಸು ಕೇಸರಿ ಬಲ್ । ಬಲದೊಳು ಪೋಗೊಳಿಪಂತುರ ।
ಲಿಯುವೆ ನಾ ಧುರದಿ ॥ ೨ ॥ ಬರಿದೇ ಮಾನವನೆಂಬುದ । ಮರೆದೇ ಕೊಳು
ಳದೊಳು ತಲೆ । ಯರಿದೇ ತಿಂಬೆನು ಮಾಂಸವ । ನಿರದೇನಿದನರಿದೆ ॥ ೩ ॥
ರಿಸಿದಳಾಕೆಯ ಜಠರದಿ । ಉರಿಪೆರ್ಚುತ್ತ್ತಳಿವುದ ಕಂ । ಡುರುತೋಷದಿ ನಲಿ
ದು ಕ । ರ್ಬುರ ಬಲ ನೋಡೆಂದ ॥ ೪ ॥ ಒಂದೇ ಶರದೊಳು ನಿನ್ನನು ।
ಒಂದೇ ತೀರ್ಚುವೆನೆನುತ । ಯ್ಪುಂದೇಕಾಗ್ರತೆಯೊಳಗೆ । ಚ್ಚಂಬದುನಲ್ಲಂಬು ॥
೫ ॥ ಬಂದೇರಿತು ದಾನವನುರ । ಒಂದೇ ಗಿರಿ ಧರೆಗಯ್ತು । ಸ್ಪಂದದಿ ಚೀರಿದ
ನವ । ನಂದೊರಗಿದ ಕಣದಿ ॥ ೬ ॥

ಭಾಮಿನಿ

ಖಿಳಕುಲಾನ್ವಯದೀಪನಸುವಿಂ । ತಳಿಯಲೇಕೋದರರು ಹಂಬಲ । ನುಳಿದು
ುಲಾಸನ ಪುರಾತನ ಚಿಂತೆಯೊಳು ಮುಂದೆ ॥ ಬಲುತವಕದೊಳಗಯ್ದಿ
ಡರು । ಶಿಲೆಯೊಳಗೆ ಹುದುಗಿರ್ಪ ವಾಣೀ । ಲೋಲ ನಿಶ್ಚಲಮೂರ್ತಿ ನಿರು
ಮ ಕೀರ್ತಿಧಾರಕನ ॥ ೧ ॥

ರಾಗ ನೀಲಾಂಬರಿ ಆದಿತಾಳ

ಪರಮಪುರುಷ ಸುರಾ । ಸುರವಂದಿತ ನಮೋ । ಕರುಣಶರಧಿ ಪಾಣಿ ।
ರಸ ನಮೋ ನಮೋ ॥ ಧರಣಿಗೆ ಕಾರಣ । ಪುರುಷೋತ್ತಮ ನಮೋ ।
ರಿತಪರನೆ ಪಾಹಿ । ನಿರತ ಪಾಲಿಸು ನಮೋ ॥ ೧ ॥ ಗತಿಗಾಣದೆ ನಿ । ನ್ನತಿ
ು ಮಮತೆಯೊಳ್ । ಸತತ ಸಂಬುವ ತೆರ । ಮತಿ ಪಾಲಿಸು ದೇವ ॥ ನತ
ಗ್ಯರು ನಮ । ಗತಿಸಂಪದವಿತ್ತು । ಗತಿ ಪಾಲಿಸುಮಾ । ಪತಿ ಸುಪ್ರೀತ ॥೨॥

ರಾಗ ಪಂತುವರಾಳಿ ಏಕತಾಳ

ದೂರ ಮಾಡುವರೆ ಬೊಮ್ಮ । ಈ ಪರಿ ನಮ್ಮ ॥ ಪ ॥ ದೂರ ಮಾಡುವರೆ

ಭಾರತಿವರ ಚರ । ಣಾರವಿಂದವನು ಸೇರಿದನಾಥರ ॥ ಅ ॥ ಸೃಷ್ಟಿಗೊಡೆಯ ನೆಂಬರು । ನಿನ್ನನು ಕಂಡು । ಮುಟ್ಟಿ ಪೂಜೆಯು ಗೊಂಬರು ॥ ಪುಟ್ಟಿದರವರುತ್ಕೃಷ್ಟ ಜಾತಿಯೊಳು । ಮುಟ್ಟಲೆಮ್ಮವರು ಭ್ರಷ್ಟನೆಂಬುವರು । ಸೃಷ್ಟೀಶನೆ ಮನ ಮುಟ್ಟಿ ನುತಿಪೆ ಕೈ । ಬಿಟ್ಟರೆಮಗಿಹುದೆ ಬಟ್ಟೆ ಯೋಚಿಸಲು ॥ ೧ ॥ ಮನವೆ ನಿನ್ನನು ಸೇರಲು । ನೀ ಹೊರತೆಮ್ಮ । ಮನೆಯೊಳು ಪಗಲಿರುಳು ॥ ದಿನಗಳೆ ವಾಯುಸವನು ಬಣ್ಣಿಸಲೇಂ । ಜನರಂಜನ ಗುರುಜನ ಸೇವಿತ ಸುರ । ಜನವಂದಿತ ಪೊರೆಯನುದಿನ ಸೇವಿಪ । ಜನರನುವಿನಲಿ ಮೈದೋರೀಕ್ಷಣ ನೀ ॥ ೨ ॥

ರಾಗ ಆನಂದಭೈರವಿ ಅಷ್ಟತಾಳ

ಈ ರೀತಿಯಿಂದ ಸನ್ನುತಿಸಲನುಜನು ಬಲು । ಭೂರಿ ಭಕ್ತಿಗೆ ಮೆಚ್ಚುತ ॥ ತೋರಲು ನಿಜವ ಬಾಲರು ಕಂಡು ಕುಣಿದಾಡೆ । ಶಾರದೆವರನೆಂದನು ॥ ೧ ॥ ದೃಢಕೆ ಮೆಚ್ಚಿದೆನಯ್ಯ ಬೇಕಾದ ವರ ಬೇಡು । ಕೊಡುವೆನು ಸಂತಸವ ॥ ಪಡೆದು ದೆನ್ನಯ ಮನವಿದಕೆ ಸಂಶಯವಿಲ್ಲ । ಜಡಜಸಂಭವ ತಾನೆಂದ ॥ ೨ ॥ ಪುಂಡರೀ ಕೋದ್ಭವ ವರದೆಯಾಳ್ದನೆ ನಮೋ । ಖಂಡೇಂದುಧರಸಖನೆ ॥ ಅಂಡಜವೇರ್ದನ ಕಂದ ನಾಲ್ಮೊಗ ನಮೋ । ಶುಂಡಾಲವರದ ನಮೋ ॥ ೩ ॥

ರಾಗ ಶಂಕರಾಭರಣ ತ್ರಿವುಡೆತಾಳ

ಅಹುದೆ ನೀ ವಾಣೀವರ । ವಂದಿತಸುರ ॥ ಪ ॥ ಅಹುದೆ ನೀನು ವಿಧಾತ ನೆಂಬನು । ಮಹಿಯು ಪೆತ್ತವ ನೀ ವನದಿ ಕ । ಗ್ಗುಹೆಯೊಳಡಗಿಹುದೇನ್ ಘನವು ಮನ । ದಹಿಸುತಿದೆ ಕಣ್ಣಾರೆ ಕಂಡರೆ ॥ ಅ ॥ ಕೊಡುವರೇನಿಹುದೆನ್ನೊಳು । ಕಂಡರೆ ನಿನ್ನ । ಬಡವಾಗಿ ತೋರ್ಪೆ ಕೇಳು । ಬಡವನು ॥ ತಂದಿರುವ ಫಲಗಳ ಕೊಡುವೆನು । ಪುಷ್ಪಗಳ ಮೈಯೊಳಗಿಡುವೆನು । ಕರಗಳಲಿ ಪಾದವ ಪಿಡಿವೆನು । ನಿತ್ಯದೊಳು ನಿನ್ನನು ॥ ಬಿಡದೆ ಮನದೊಳಗಿರಿಸಿ ನಗುವೆನು । ಪೊಡವಿ ಧರಿ ಪಂದದಲಿ ಧ್ಯಾನವ । ನಡಿಗಡಿಗೆ ಮಾಳ್ಪಂತೆ ಕರುಣದಿ । ಕೊಡು ಮತಿಯ ಜಗದೊಡೆಯ ಕಮಲಜ ॥ ೧ ॥

ರಾಗ ಮಾರವಿ ಏಕತಾಳ

ಸಂತಸವಾಯ್ತೆನಗೆ । ಮನದೊಳು । ಚಿಂತನೆ ಬಿಡಿ ನಿಮಗೆ ॥ ಮುಂತಪ್ಪುದು ಮೇಲಿದಕಾಲೋಚನೆ । ಚಿಂತಿಸಿ ಪೇಳ್ವೆನು ಲಾಲಿಸಿರೆಂಬುದ ॥ ೧ ॥ ಕೊಂದಿ ರನೇಕರನು । ಕಾರಣ । ಪೊಂದಿಹುದಘ ತಾನು ॥ ಕುಂದದೆ ಸ್ನಾನವ ವಿರಚಿಸೆ ಜಾಹ್ನವಿ । ಯಿಂದಲೆ ದೋಷವು ನಿಜವಿದು ನಾಶವು ॥ ೨ ॥

ಭಾಮಿನಿ

ಜಗತಿಪಾವನೆಯಳನು ತೊಟ್ಟರೆ । ಅಘವಿನಾಶವು ಮುಂದೆ ಬರ್ಪುದು । ಗಳವವರೊಳು ಕಾದಿ ವೀರರ ಮಿಗಿಸಿ ಕದನದೊಳು ॥ ಪೊಗಗೊಳಿಸೆ ದೇಹವನು ರಾಜಾ । ದಿಗಳ ಕೊಂಬುವುದೆನ್ನ ಸಮುಖದಿ । ಮಿಗೆ ಹರುಷದೊಳು ನಿಮ್ಮ ರು ಪೂಜಿಸುವರಿದು ದಿಟವು ॥ ೧ ॥

ರಾಗ ಅಸಾವೇರಿ ಝಂಪೆತಾಳ

ನುಡಿದಾಗ ಕಮಲಜನು ಬಿಡದೆಯಂತರ್ಧಾನ । ಪಡೆಯೆ ಪೊಡಮಡುತ ಾಲಕರು ॥ ಜಡಜಸಂಭವನೆಂದ ನುಡಿಯ ಮನದೊಳು ಗ್ರಹಿಸಿ । ಬಿಡದೆ ಾಹ್ನವಿಯ ಸಾರಿದರು ॥ ೧ ॥ ಗೌರಿಯಾಳ್ದನ ಜಟೆಯ ಸೇರುತ್ತೈತಂದ ಭಾ । ೀರಥಿಯ ಕಂಡು ಸಂತಸದಿ ॥ ಭೂರಿ ಭಕ್ತಿಯೊಳು ನುತಿಸುತ್ತಲುಬ್ಬೇರುತಿಹ । ೀರಿಗಿಳಿದರು ಸಗಾಧದಲಿ ॥ ೨ ॥ ವಿರಚಿಸಿದರಲ್ಲಿ ಸ್ನಾನಾದಿಗಳ ಮೇಲೆದ್ದು । ರಮುಗಿದು ನಮಿಸಿ ಭಕ್ತಿಯಲಿ ॥ ಸ್ಮರಿಸಿ ಕೊಂಡಾಡಿದರು ಮನದಣಿಯೆ ಾಡಿದರು । ಸುರವಂದ್ಯೆ ಜಾಹ್ನವಿಯನಂದು ॥ ೩ ॥

ಭಾಮಿನಿ

ಕೇಶವನ ಪದನಖದೊಳೊಗೆದು । ಬ್ಬೀಶ ಬಂಧಿಸೆ ಜಟೆಯೊಳಿಳಿದು ಮ । ೀಶಗೊಲಿದು ವಿರಾಗಿ ಮುನಿದಾಪೋಶಿಸಲ್ ಬಳಿಕ ॥ ಬೇಸರಿಸದೈದಾ ಭಗೀ ಥ । ನಾಸೆ ಪೂರೈಸಿದ ತ್ರಿಲೋಕದಿ । ದೋಷರಹಿತೆ ಮದಘವಿನಾಶಿನಿ ಪೊರೆ ುನೋರಥವ ॥ ೧ ॥

ರಾಗ ನೀಲಾಂಬರಿ ಏಕತಾಳ

ಭೂರಿ ಭಕ್ತಿಯೊಳಿಂತು ಪಾಡುತಾಕ್ಷಣದಿ । ವೀರಾಧಿವೀರ ಚೆನ್ನಯ ಕೋಟಿ ುದದಿ ॥ ಚಾರು ಸಂತಸದೊಳು ರಚಿಸಿ ಭೋಜನವ । ಕಾರಣಿಕರು ಮುಂದೆ ಂಡರು ಪಥವ ॥ ೧ ॥ ಶಾರದೆವರನೊಲವಿಂದ ಪಾವನೆಯು । ಸೇರಿತು ನಾಶ ಾದುದು ಪೊಂದಿದಘವ ॥ ಈ ರೀತಿಯಿಂದ ಪೋಗೊಳಿಸಿದಂತಾಯ್ತು । ೀರಿದರಹುದು ಪಂಜವ ಮುಂದಿನ್ನೊಳಿತು ॥ ೨ ॥

ಭಾಮಿನಿ

ಜಡಜಸಖ ಬೇಸರನುಳಿಯೆ ಪಡು । ಗಡಲ ಸೇರಲ್ಕಂದು ಮನದೊಳ । ೊಡೆದುಗುವ ಸಂತಸದ ನಗು ಕೆಂಪೊಡೆದುದೆಲ್ಲೆಡೆಯು ॥ ಬಡನಡುವಿನುಡುಗಿದ ಮಾಂಗದ । ಮುಡದಿ ಸಂಧ್ಯಾವಳಿ ವಿಹಂಗದ । ನುಡಿತೆಯಲಿ ಬಂದಪ್ಪಿ ನೇಸರ ೊಯ್ದಳುಡುಮುಖಿಯು ॥ ೧ ॥

ರಾಗ ಸಾಂಗತ್ಯ ರೂಪಕತಾಳ

ಹರಿ ಸೇರೆ ಹರಿಯು ಲಹರಿಯೊಳು ಹರಿತಂದು । ಹರಿವಿಕ್ರಮಿಗಳು ಮನದೊಳು ॥ ಹರಿಯು ಸೆಸೆದು ಪಯ್ಯಬೈದ್ಯನ ಪೆಸರೆತ್ತಿ । ಕರೆಯಲು ಹರಿದುದುತ್ತರವು॥೧॥ಯಾರಯ್ಯ ನೀವಿಂತು ದೂರ ದಾರಿಲಿ ನಿಂತು। ಯಾರ ಕೇಳ್ವಿರಿ ಕಾರ್ಯವೇನು ॥ ಮಾರಮಣನು ಸಂಕಮಲೆಗೆ ಮಧುವ ತರೆ । ಸಾರಿದ ನಾನೋರ್ವಳಿಹೆನು ॥ ೨ ॥ ಉತ್ತಮಕುಲಜರಿಗಿತ್ತ ಪದ್ಮದ ಕಟ್ಟೆ । ಇತ್ತ ಚಪ್ಪರ ಒಕ್ಕಲಿಗರ ॥ ಮೊತ್ತಕ್ಕೆ ಮೊಗಸಾಲೆಯಲ್ಲಿ ತೂಗುಯ್ಯಾಲೆ । ಮತ್ತೆ ನಮ್ಮವರಾದರಿಹುದು ॥ ೩ ॥ ಆಗಲೆ ಪೋದವರೀಗ ಬರಲು ಹೊತ್ತು । ಸಾಗಿತೆಂಬುದ ಕೇಳುತವರು ॥ ಹೋಗಬಾರದು ಮನೆಯೊಳಗೆ ಗಂಡಸರಿಲ್ಲ । ವಾಗಿ ಚಪ್ಪರಕೆ ಸಾರಿದರು ॥ ೪ ॥ ಅಲ್ಲೆ ಹಾಸುತ ಹಾಸಿಗೆಯು ಕುಳ್ಳಿರಲು ನೀರ । ಚೆಲ್ವೆಯಾಸರಿಗೆಂದು ನೀಡೆ ॥ ಬಿಲ್ಲವಕುಲತಿಲಕರು ಕಂಡು ನುಡಿದರು । ಸೊಲ್ಲದಿರಲು ತವ ಕುಲವ ॥ ॥ ೫ ॥ ನೀರ ಮುಟ್ಟುವರಲ್ಲ ಬೇರೆ ಸಂಶಯವಿಲ್ಲ । ಯಾರಾಕೆ ನಿನ್ನ ಪೆತ್ತಾಕೆ ॥ ಊರು ತಂದೆಯು ಮೂಲಸ್ಥಳವಾವುದೆನುತ ವಿ । ಚಾರಿಸೆ ಪೇಳಿದಳಾಕೆ ॥ ೬ ॥

ರಾಗ ಕಾಂಭೋಜಿ ತ್ರಿವುಡೆತಾಳ

ವರ್ಣದೊಳು ಮೇಲೆನಿಸಿದಾಕೆ ಸು । ವರ್ಣ ಕೇದಿಗೆಯುಳ ಚರಿತೆ ಕುಲ । ವರ್ಣಿತವು ಕಿವಿಗೊಟ್ಟು ಕೇಳಿರಿ । ವರ್ಣಿಸುವುದ ॥ ೧ ॥ ಲಗ್ನವಾಗದ ಮುನ್ನ ಬಾಲ್ಯವು । ಭಗ್ನವಾಗಲು ಕಂಡು ಚಿಂತಾ । ಮಗ್ನರಾದರು ಪೆತ್ತವರು ದು । ರ್ಲಗ್ನದೊಳಗೆ ॥ ೨ ॥ ಬಿಟ್ಟರಾಕೆಯು ವನದಿ ಕಣ್ಣನು । ಕಟ್ಟಿ ತಂದನು ಬಿಲ್ಲನೋರ್ವನು । ಬಟ್ಟೆಯುರಿಯುದ ಬಾಲೆಗಾಶ್ರಯ । ಕೊಟ್ಟನಾಗ ॥ ೩ ॥ ಮುದದೊಳಾಕೆಯು ಬ್ರಹ್ಮಬೈದ್ಯಗೆ । ಮದುವೆಯಾಗಲು ಪೆತ್ತು ದೇವಿಯು । ಮುದದಿ ಕಾಂತಣ್ಣನಿಗೆ ಕೊಡೆ ನಾ । ನುದುಭವಿಸಿದೆ ॥ ೪ ॥ ಪುಣ್ಯಪುರುಷರ ಚೊಚ್ಚಲಿಕೆ ನಾ । ಕಿನ್ನಿದಾರುವು ಜನಿಸೆ ಮೂಲವ । ದುನ್ನತದ ಕೆಮ್ಮಲಜೆ ಬ್ರಹ್ಮನು । ನಮ್ಮ ದೇವ ॥ ೫ ॥ ಪೂರ್ವಚರಿತೆಯು ಕೇಳ್ದಿರೇನ್ನೈ । ನೀರ ಕುಡಿಯದೆ ಬಲು ವಿಚಿತ್ರದಿ । ಮೋರೆ ಮೋರೆಯು ಕಾಂಬವರು ನೀ । ವ್ಯಾರು ಪೇಳಿ ॥ ೬ ॥

ರಾಗ ತೋಡಿ ಆದಿತಾಳ

ಭಾವಕಿ ಚೋದ್ಯವಿಂದು । ತೋರ್ಪುದು ಕೇಳು । ದೇವಿಯೇನಾದಳೆಂದು ॥ ಭಾವಶುದ್ಧದಿ ಪೇಳಿದ । ನಿನ್ನಯ ತಾತ । ನ್ಯಾವೆಡೆಯೊಳಗೆಂಬುವ ॥ ೧ ॥ ಅಚ್ಚಕುಸುಮಗಂಧಿನಿ । ನಿನ್ನಯ ತಾಯ್ಗೆ । ಚೊಚ್ಚಲ ಮಗಳೆಂದೆ ನೀ ॥ ಮುಚ್ಚುಮರೆಯನೆ ಬಿಟ್ಟು । ಬೆನ್ನಿಗ್ಯಾರೆಂದು । ಉಚ್ಚರಿಸಿದರ ಗುಟ್ಟು ॥ ೨ ॥

ರಾಗ ಮಾರವಿ ಏಕತಾಳ

ನುಡಿವೆನು ಮುಂದಣ ಕಥೆಯು । ಕೇಳಿರಯ್ಯ । ರೂಢಿ । ಗೊಡೆಯು ಪೆರು
ುಳಾಖ್ಯನಂತೆ । ಕೇಳಿರಯ್ಯ ॥ ಬಿಡದೆ ಬೇಟೆಯಾಡೆ ಮುಳ್ಳು । ಕೇಳಿರಯ್ಯ ।
ಾಲ । ಕಡಿಯೆ ಬಸಿರಿ ತಾಯು ಕರೆಸೆ । ಕೇಳಿರಯ್ಯ ॥ ೧ ॥ ಮುದ್ದು ಮಾಡುತಿರ್ದ
ಾಯಿ । ಕೇಳಿರಯ್ಯ । ಯುಮಳ । ಮುದ್ದು ಕುವರರನ್ನು ಪಡೆದು । ಕೇಳಿ
ಯ್ಯ ॥ ಬಿದ್ದುಹೋದಳೆಂದು ತಿಳಿದೆ । ಕೇಳಿರಯ್ಯ । ಹೆತ್ತ । ಸುದ್ದಿ ಸಾವನರಿಯೆ
ಂಡು । ಕೇಳಿರಯ್ಯ ॥ ೨ ॥ ವರುಷವೇಳರೊಳಗೆ ನಾನು । ಕೇಳಿರಯ್ಯ ॥
ನ್ನ । ಪುರುಷನ ಕೈಹಿಡಿದು ಬಂದೆ । ಕೇಳಿರಯ್ಯ ॥ ಪೆರುಮಳಾಖ್ಯ ಪೊರೆದ
ಂತೆ । ಕೇಳಿರಯ್ಯ ॥ ಮುದ್ದು । ತರಳರೆನ್ನ ತಮ್ಮಂದಿರನು । ಕೇಳಿರಯ್ಯ ॥
೩ ॥ ಯೋಗವೆಂದಿಗಿಹುದೊ ಕಾಣೆ । ಕೇಳಿರಯ್ಯ । ನೀರ । ರಾಗದಿಂದ
ಡಿಯುಬಹುದೆ । ಕೇಳಿರಯ್ಯ ॥ ಬೀಗಿತೇತಕಕ್ಷಿ ನಿಮಗೆ । ಕೇಳಿರಯ್ಯ ।
ುಃಖ । ಬೇಗೆ ಸೋಂಕಿತೇಕೆ ನಿಮ್ಮ । ಕೇಳಿರಯ್ಯ ॥ ೪ ॥

ಭಾಮಿನಿ

ತರಳೆಯಾಡಿದ ನುಡಿಯು ಕೇಳುತ । ಹರುಷವಾರಿಧಿ ಸೂಸಲನುಜರು ।
ುರಿವ ಬಾಷ್ಪಾಕುಲವ ಸೆರಗಿನೊಳೊರೆಸುತಡಿಗಡಿಗೆ ॥ ಕರುಣೆ ವಾರಿಧಿಶಯನ
ನೀ । ಸರಸಿಜಾಕ್ಷಿಯು ಕಾಂಬ ಯೋಗವ । ಕರುಣಿಸಿದೆಯದರಿಂದ ನಿನ್ನಯ
ರಣಕೊಂದಿಪೆವು ॥ ೧ ॥

ರಾಗ ಕೇದಾರಗೌಳ ಅಷ್ಟತಾಳ

ಅಮ್ಮ ನಿನ್ನ ತಮ್ಮನೀತನು । ಚೆನ್ನಯ್ಯನೆಂಬ । ರಮ್ಮ ಕಿರಿದು ಪುಟ್ಟಿದಾತನು ॥
ಮ್ಮ ಜ್ಯೇಷ್ಠಳೆಂದು ತಿಳಿದೆ । ನಮ್ಮ ನಾನು ಕೋಟಿ ನಿನ್ನ । ಅಮ್ಮನ ಬಸಿ
ದ ಬಂದೆ । ವಮ್ಮ ಯುಮಳರಾಗಿ ನಾವೆ ॥ ೧ ॥ ಹುಟ್ಟು ತಾಯಿಗರಿಷ್ಟ
ಯಿತು । ಸಾಯಿನನಲ್ಲಿ । ರೊಟ್ಟಿ ತಿಂದು ಪುಷ್ಟವಾಯಿತು ॥ ಇಷ್ಟಮಿತ್ರ
ರು ಕೈ । ಬಿಟ್ಟು ಪೆರುಮಳನೂರಿಗೆ ಗಡಿ । ಇಟ್ಟು ರಾಜ್ಯಭ್ರಷ್ಟರಾಗಿ ।
ಟ್ಟಿತು ನಿನ್ನೂರನಿಂದು ॥ ೨ ॥ ಅಕ್ಕ ನಿನ್ನ ಕಾಲಿಗೊಂದಿಸಿ । ತಾಯನ್ನು ತೊರೆದ ।
ಃಖಾಗ್ನಿಯು ನಾವು ನೋಂದಿಸಿ ॥ ಉಕ್ಕುವ ಕಣ್ಣೀರಿನಿಂದ । ಚೊಕ್ಕವಾಗಿ
ಳಿದು ನಮ್ಮ । ದುಃಖವನ್ನು ತಣಿಸಿಕೊಂಬೆ । ವಕ್ಕ ಮರುಗಬೇಡ ನೀನು ॥
೩ ॥ ಎಂದು ಕಾಲಿಗಿಂದು ವಂದಿಸೆ । ಕಾಣುತ್ತಲಾಕೆ । ಚಂದದಿಂದಲಪ್ಪಿ
ಂದ್ದಿಸೆ ॥ ಕಂದರೀರ ನಿಮ್ಮ ಕಾಂಬ । ರಿಂದು ಯೋಗ ಬಂದುದಯ್ಯ । ತಂದೆ
ಯ್ಯರನ್ನು ತೊರೆದ । ಮಂದಭಾಗ್ಯರಿಂದು ನಾವು ॥ ೪ ॥ ಮರೆಯೊಳಲ್ಲಿ

ನಿಂತು ಕೇಳುತ । ಬನ್ನಯ್ಯ ಬೈದ್ಯ । ಭರದಿ ಬಂದು ಏಳಿರೆನ್ನುತ ॥ ಶಿರವ
ನೆಗಹುತೀರ್ವರನ್ನು । ಕರೆದು ತಂದುಯ್ಯಾಲೆಯೊಳ । ಗಿರಿಸಿ ಶ್ಯಾಲಕರಿರ
ಕಂಡು । ಹರುಷವಾದುದಯ್ಯ ನಿಮ್ಮ ॥ ೫ ॥

ಭಾಮಿನಿ

ಬಂದಿರೈ ಬಾವನ್ನದೊಳು ಬಲು । ನೊಂದಿರೈ ದುಗುಡವನೊಗೆದು ಸೈ । ಪೊಂದಿರೈ ವಿಧಿ ಕಷ್ಟ ತಾಯುನಗಲ್ದು ಬೆಮರಿಡುತ್ತೈ ॥ ತಂದಿರೈ ಮರುಗಲ್ಕಹುದೆ ಲೇ । ಸಿಂದಿನ್ನೆಸಲೆ ಜಗವಿರದು ಬಾ । ರೆಂದುಣಲ್ಬಡಿಸಿದಳಜೇಯರ ಸಂತವಿಡು ತಂದು ॥ ೧ ॥

ಕಂದ

ಮಣಿಗಣ ಸಿಂಹಾಸನಮಂ । ಗುಣಮತಿ ಪೃಥ್ವೀಪತಿಯತ್ತ ರವಿಯುಂದಯು ದೊಳುಂ ॥ ಗಣಿಕರ್ವೆರಸುತೆ ಕೇಮರ । ಮಣಿದರ ತಳ್ಕಿಸಿ ಏರ್ದನು ಕೇಳ್ವುದು ಸುಮತೀ ॥ ೧ ॥

ರಾಗ ಕಾಂಭೋಜಿ ತ್ರಿವುಡೆತಾಳ

ಇತ್ತ ಕೇಳ್ ಕೇಮರನೆನುವ ಭೂ । ಪೊತ್ತಮನು ಓಲಗದೊಳಿರ್ದ ಸ । ಮಸ್ತರನು ಕೂಡುತ್ತ ಸಂತಸ । ವೆತ್ತು ನುಡಿದ ॥ ೧ ॥ ಕೇಳಿರೈ ಬಿಲ್ಲಾಳುಗಳು ನೀವ್ । ಕೇಳಿದಿರೆ ನಮ್ಮೂರಿಗಯ್ದಿದ । ಬಾಲರೀರ್ವರು ಬಲುಭಟರು ಬಿ । ಲ್ಲಾಳರಂತೆ ॥ ೨ ॥ ಮತ್ತಗಜಕಂಕುಶರು ಧೂರ್ತರ । ಚಿತ್ರಹಿಂಸಕರಂತೆ ಸಮ ಬಲ । ರೆತ್ತಿ ತಿರುಗಲು ತಲೆಯು ಬಿಡರೆ । ನ್ನುತ್ತ ಕೇಳ್ದೆ ॥ ೩ ॥ ಇಂದು ಸುಕೃತವ ಸಂಧಿಸಿತು ಮುದ । ದಿಂದ ನಲಿಯುವ ಸರಿ ಬಲಾನ್ವಿತ । ವೃಂದಕಿವರಂಕುಶರು ಕಂಡರೆ । ಚಂದದಿಂದ ॥ ೪ ॥ ಕರೆದು ತಂದೀ ಸಭೆಯೊಳಗೆ ನಾ । ವಿರಿಸಿಕೊಳ್ಳಲು ಬೇಹುದಿವರನು । ಮರೆಯ ಮಾತಲ್ಲವಿದು ಮಂತ್ರೀ । ಶ್ವರನೆ ಕೇಳು ॥ ೫ ॥

ವಾರ್ಧಿಕ

ಪಂಜಾಧಿಪತಿಯ ನುಡಿ ರಂಜಿಸಿತು ಸಭೆಯೊಳಗೆ । ಮಂಜು ಕವಿದಂತಾಗೆ ಚಂದುಗಿಡಿ ಸಚಿವಂಗೆ । ಕಂಜಾನನವು ಬಾಡಿ ಬಳಲಿ ಹೃದಯದಿ ಶೂಲ ಸಿಂಜಿಸಿದ ತೆರನಾದುದು ॥ ನಂಜ ನುಂಗಿದನಿವರು ಧೊರೆಯ ಸೇರಲು ನಮ್ಮ । ನಂಜಿಪರು ಸ್ಥಾನವನು ಚ್ಯುತಿಗೊಳಿಪರದರಿಂದೆ । ಭಂಜಿಸುವ ಯತ್ನಗೈಯುವೆನೆನುತ ಮುಂಜಾನೆ ಸಂಜೆ ಯೋಚಿಸುತಿರ್ದನು ॥ ೧ ॥

ರಾಗ ಜಂಜೂಟಿ ತ್ರಿವುಡೆತಾಳ

ತಾಳಲಾರೆನು । ಕೇಳಿ । ಬಾಳಲಾರೆನು ॥ ತಾಳಲಾರೆನಯ್ಯ ಭೂಪ । ಪೇಳುವ ನುಡಿಯ ಕೇಳಿ । ಖೂಳರ ಸಹವಾಸದಿಂದ । ಬಾಳುವೆ ಮುಂದಿನ್ನು ಕಾಣೆ

॥ ೧ ॥ ಹಾವನೊಯ್ದು ಶಿರದ ಮೇಲೆ । ಹೂವಿನಂತೆ ಮುಡಿಯಲಾಗಿ । ಜೀವ ದಾಸೆ ಬೇರಿನ್ನಿಹುದೆ । ಭಾವಿಸಿದರೆ ॥ ಜೀವಘಾತಕರ ತಂದು । ಈವರೆ ಮುಂದಾಸನವ । ನ್ಯಾಯನೀತ ನಮ್ಮ ಭೂಪ । ಕೋವಿದನಿರ್ದೇನು ಫಲವು ॥ ೨ ॥ ಕಾಗೆ ಕೋಗಿಲೆಯನೊಂದೆ । ಜಾಗದೊಳಿಟ್ಟಂತೆ ಪುಲಿಯು । ಮಾಗಿತೆಂದು ಗೋವಿನೊಡನೆ । ಸಾಗಿಸಿದಂತೆ ॥ ರಾಗದಿಂದ ಪಿಡಿದು ಕರದಿ । ಭೋಗಿಗೆ ಪಾಲಿತ್ತ ಪರಿಯೊಳ್ । ಬೀಗಿದರ ತಂದರನು । ರಾಗವಿರ್ಪುದೆ ನಮ್ಮೊಳು ॥ ೩ ॥ ಸೂರೆಗೊಂಬರಯ್ಯ ಮನವ । ನಾರಿ ವೃದ್ಧ ಬಾಲಕರ । ಊರನೀ ಮರುಳುಗೊಳಿಪ । ವೀರರೀರ್ವರ ॥ ಸೇರಿದಾಗಲೆಮ್ಮ ನರಪ । ಬೇರೆ ನಮ್ಮ ಕಾಂಬನೇನು । ಕಾರಣ ಬೇರಿನ್ನು ಕಾಣೆ । ಪೋರರರ ಕೊಲ್ಲುವ ಬಗೆಗೆ ॥ ೪ ॥

ವಾರ್ಧಿಕ

ಪರಿಯು ಕಾಣದೆ ಸಚಿವನುರುತರದಿ ಚಿಂತಿಸುತ । ಲಿರಲೊಂದು ದಿನದಿ ಕೇಮರನೃಪನ ಸಭೆಗಯ್ದೆ । ಚರನೋರ್ವ ಲಿಖಿತವನು ಕರತಳಕೆ ನೀಡಿ ನೃಪ ಚರಣಕಭಿವಂದಿಸುತಲಿ ॥ ಪೆರುಮಳಾಖ್ಯನ ಗುಪಿತ ಹರಿಕಾರ ತಾನೆನುತ । ಒರೆಯೆ ಮನ್ನಿಸುತವನನಿರದೆ ಮಂತ್ರಿಯು ಭೂಪ । ಕರೆದಂತರಂಗದೊಳಗಿತ್ತು ಲಿಖಿತವ ವಾಚಿಸೆಂದು ಹರುಷದೊಳಿರ್ದನು ॥ ೧ ॥

ರಾಗ ಹರಿಕಾಂಭೋಜಿ ಝಂಪೆತಾಳ

ಮಿತ್ರಾಂಬುಜಾವಳಿಗೆ ಮಿತ್ರನಂತೆಸೆಯುವ ಧ । ರಿತ್ರಿಪತಿ ಪಂಜಾಧಿಪತಿಗೆ ॥ ಧಾತ್ರೀಶ ಪಡುಮಲಾಧಿಪ ಪೆರುಮಳಾಖ್ಯ ಬಲು । ಮಿತ್ರಭಾವದಿ ಬರೆದ ಲಿಖಿತ ॥ ೧ ॥ ಕ್ಷೇಮಿಗಳು ನಾವು ತವ ಕ್ಷೇಮವನು ಬಯಸುವೆವು । ಭೂಮಿಪತಿ ನಮ್ಮ ರಾಜ್ಯದಲಿ ॥ ನೇಮ ಮೀರುತಲೀರ್ವರ್ ಬಾಲಕರು ನಮ್ಮೊಳತಿ । ಪ್ರೇಮಿ ಮಂತ್ರಿಯನು ವಧಿಸಿದರು ॥ ೨ ॥ ಹಿರಿಯಾತ ಕೋಟಿ ಕಿರಿಯನು ಚೆನ್ನಯನು ದುಷ್ಟ । ತರಳರಿವರತಿ ಬಲಾನ್ವಿತರು ॥ ಅರಿಯದಂದದೊಳೂರ ತೊರೆದಿಹರು ನಿಮ್ಮೂರ್ಗೆ । ಬರಲಲ್ಲಿ ಪಿಡಿದು ಕಳುಹಿಪುದು ॥ ೩ ॥ ಹೆರಿಗೆವೇದನೆಯ ಹೆತ್ತಾಕೆ ತಾ ತಿಳಿವಂತೆ । ಪುರದ ಮರಿಯಾದೆ ದೊರೆಗಳ್ಗೆ ॥ ಅರಿತವರಿಗಿನ್ನು ನಾಸರುಹಬೇಹುದೆ ಮುಂದೆ । ಮರೆಯಬಾರದು ಬಿನ್ನಪವನು ॥ ೪ ॥ ಇಂತೆನುವ ಲಿಖಿತವನು ಮಂತ್ರಿ ವಾಚಿಸೆ ಕೇಳ್ದು । ಚಿಂತಿಸಿದ ಭೂಪನಿನ್ನಿವರ ॥ ನೆಂತು ಬಿಡಲೆಂದೆನುತ ಹಂಬಲಿಸೆ ಸಚಿವ ತಾ । ಸಂತಸದೊಳೆಂದ ಭೂಪತಿಗೆ ॥ ೫ ॥

ರಾಗ ಮಾರವಿ ಏಕತಾಳ

ಚಿಂತನೆ ಬೇರಿಲ್ಲವಿದಕೆ ಪೆರುಮಳಾಖ್ಯ । ನಮ್ಮ । ಚಿಂತಿಸಿ ಬರೆದ ಲಿಖಿತ

ನೋಳ್ಪುದೇಕೆ । ಇಂತಹ ಮೂರ್ಖರೊಳ್ ನಮಗೆ ಕಾರ್ಯವೇಕೆ । ಇವರ । ನೆಂತಾದರು ಪಿಡಿದು ಕಳುಹಬೇಕು ಜೋಕೆ ॥ ೧ ॥ ಮಾನ ಕಾಯದಿರಲು ನಮಗೆ ನ್ಯೂನವಯ್ಯ । ಮುಂದಿ । ನ್ನೇನು ಯೋಚನೆಯು ಬೇಡ ಧೀರನಯ್ಯ ॥ ಮಾನ ವಾಧಿಪನು ಪೆರುಮಳಾಖ್ಯನಯ್ಯ । ಸಖ್ಯ । ತಾನಾಗಿ ಬರ್ಪುದರಿಂದೆ ಕಾವು ದಯ್ಯ ॥ ೨ ॥ ಬುದ್ಧಿವಂತ ಸಚಿವನನ್ನು ನಾಶಗೈದ । ಇವರ । ಸುದ್ದಿ ಬೇಡ ವಯ್ಯ ನಮ್ಮ ಪಯ್ಯಬೈದ್ಯ ॥ ಕದ್ದು ಸಲಹುತಿರ್ಪನಿವರನೆಳೆದು ತಂದು । ಬೇಗ । ಶುದ್ಧಿಗೆಯ್ಯಬೇಹುದೂರನಿವರ ಕೊಂದು ॥ ೩ ॥ ಅಪ್ಪಣೆಯನೀಯಬೇಕು ಚೋರರನ್ನು । ಹಿಡಿದು । ತಪ್ಪೆನಿದಕೆ ತಾಳದೆ ಸಂದೇಹವನ್ನು ॥ ಉಪ್ಪರಿಗೆಯೊಂದ ರಚಿಸಿ ತಿಳಿಯದಂದ । ದಿಂದ । ಗುಪ್ತವಾಗಿ ಹನನಗೈವೆ ನೋಡು ಚಂದ ॥ ೪ ॥

ವಾರ್ಧಿಕ

ಕೇಣ ಮುಂಬರಿದುರಿಯೆ ಜಾಣ ಮಂತ್ರೀಶ್ವರಂ । ಮಾಣದೆಸಗಿದನೊಂದು ಸ್ಥಾಣು ಸೌಧಾಗ್ರಮಂ । ತ್ರಾಣಿಗಳ ಕೊಲಲೆಂದು ಮೇಣೆರಡು ಗವಯುವೊಂದರಿ ವಿಲ್ಲದಂತೆ ರಚಿಸೆ ॥ ಕಾಣೆ ರಾಜಾಲಯದ ಮಾಳ್ಕೆಯಂತಿರೆ ತಳಿತು । ದಾಣತಿಯ ನಿತ್ತವನ ಮನದೊಳಕ್ಕಜವು ಪರ । ಮಾಣು ಗುಣಿ ಮಂತ್ರಿವರ ಚಿತ್ತರಿಸಿ ಪೇಳೆ ಮನವೊಲಿದು ಕಂಡನು ಜನಪನು ॥ ೧ ॥

ರಾಗ ಸೌರಾಷ್ಟ್ರ ಝಂಪೆತಾಳ

ಪಂಜಾಧಿಪತಿ ನೋಡು ರಂಜಿಸುವ ಸೌಧಾಗ್ರ । ಅಂಜಲೇಕಿನ್ನು ಹರಿ ಪಂಜ ರದ ತೆರದಿ ॥ ಕಂಜಸಖನಸ್ತದೊಳು ಗುಂಜಿಗಳ ಸೀಳುವೆನು । ಕುಂಜರನ ಪಣೆಯ ಹರಿ ಭಂಜಿಸುವ ತೆರದಿ ॥ ೧ ॥ ಭಳಿರೆ ಬಲು ಬಲವಂತ ಸಚಿವಾಗ್ರಗಣ್ಯ ನೀ । ನಿಳೆ ಯೊಳತಿ ಸಾಹಸಿಗನಯ್ಯ ॥ ಛಲವಂತ ರಚಿಸಿದೀ ನಿಲಯ ಕಾಣುತಲೆನಗೆ । ಬಲು ತೋಷವಾಯ್ತು ಕೇಳಯ್ಯ ॥ ೨ ॥ ಮತಿಯುತನೆ ಕರೆಸು ದುರ್ಮತಿಗಳನು ಹಿತ ದೋರಿ । ಚತುರತೆಯೊಳಿಲ್ಲಿ ಕೊಲೆಗೈಸು ॥ ಕೃತಕ ತೀಳಿಯದ ತೆರದಿ ಪೆರು ಮಳಾಖ್ಯಗೆ ನಾವು । ಹಿತವಂತರೆಂಬುದನು ತಿಳಿಸು ॥ ೩ ॥ ಇತ್ತಾಜ್ಞೆಯನು ನೃಪತಿಯುತ್ತ ತೆರಳಲು ಸಚಿವ । ನಿತ್ತ ಸಾರಿದನು ನಿಜ ಗೃಹಕೆ ॥ ಮತ್ತೆ ಯೋಚಿಸುತಿರ್ದ ಚಿತ್ತದೊಳಗೆಂತಿವರ । ಹತ್ತಿಸುವೆ ಕಾರಾಗೃಹಕ್ಕೆ ॥ ೪ ॥

ರಾಗ ಕೇದಾರಗೌಳ ಝಂಪೆತಾಳ

ಈ ಪರಿಯೊಳು ಚಂದುಗಿಡಿ ಯೋಚಿಸುತ್ತಿರ । ಲಾ ಪರಾಕ್ರಮಿಗಳತ್ತ ॥ ಭೂಪ ಕೇಮರನೋಲಗವ ಕಾಣಬೇಕೆನು । ತಾ ಪಯ್ಯನೊಡನೆಂದರು ॥ ೧ ॥

ಭಾವ ನಮ್ಮ ಮನೋಭಾವವ ಕೇಳಯ್ಯ । ಭೂವರನೋಲಗವ ॥ ನೀವೆಮ್ಮ ನೊಡಗೂಡಿ ಪೋಗಿ ಕಾಣಿಸಿರೆಂದು । ಭಾವ ಕರವ ಮುಗಿವ ॥ ೨ ॥ ನೆಂಟರ ಬಯಕೆ ಸಲ್ಲಿಸು ಮಹೀಪತಿ ಬಲು । ಬಂಟನೆಂಬುದ ಕೇಳ್ದೆವು ॥ ನೆಂಟರಿಗಾತನ ಭೇಟಿ ಮಾಡಿಸು ಪೂರ್ವ । ಬಂಟ ಭೂಪತಿಗೆ ನೀನು ॥ ೩ ॥ ಆದರಾಲಿಸಿರಿತ್ತ ಮೇದಿನಿಪತಿಗೆ ಬೇ । ಕಾದವನಿಹನೋರ್ವನು ॥ ಕಾದುಕೊಂಡಿಹ ಚಂದುಗಿಡಿ ಯಾತನನು ಕಂಡು । ಪೋದರಾಪುದು ಲೇಸಿನ್ನು ॥ ೪ ॥ ಚಂದುಗಿಡಿಯು ಕಾಂಬ ರಿಂದು ಪೋಗುವುದು ನಾ । ವೆಂದು ಸಾರಿದರಿತ್ತಲು ॥ ಚಂದದುಪ್ಪರಿಗೆ ಮನೆಯು ಕಂಡು ಬಾಗಿಲೊ । ಳಂದು ನಿಂದಿರಲಿತ್ತಲು ॥ ೫ ॥ ಕೇಳಿದನಿವರ ಗಮನವನ್ನು ಸಂತಸ । ತಾಳುತಾ ಕ್ಷಣ ಸಚಿವ ॥ ಲೀಲೆಯೊಳುಪಚಾರಗೈದು ಕುಳ್ಳಿರಿಸುತ್ತ । ಪೇಳಿರಿ ಬರವೆಂದನು ॥ ೬ ॥

ಭಾಮಿನಿ

ಬಂಟಕುಲಮಣಿ ಕೇಳು ತನ್ನಯ । ನೆಂಟರೀ ಯೋಧರಿಗೆ ನರಪನ । ನಂಟು ಮಾಡಿಸು ಕಾದಿಹರು ಬಹು ಕಾಲವದರಿಂದೆ ॥ ಬಂಟ ಭೂಪಗೆ ನೀನು ಬಲಗೈ । ಬಂಟನೆಂಬುದರಿಂದೆ ನಿನ್ನಯು । ನೆಂಟತನ ಮೊದಲಾಯ್ತು ಮುಂದಿನ ಕಾರ್ಯ ನೀನರುಹು ॥ ೧ ॥

ರಾಗ ಕಾಂಭೋಜಿ ತ್ರಿವುಡೆತಾಳ

ಯೋಚನೆಯ ಬಿಡಿ ಭೂಪನನು ಸಂ । ಕೋಚವಿಲ್ಲದೆ ಕಾಂಬ ಪರಿಯನು । ಸೂಚಿಸುವೆ ಮುಂದಿಲ್ಲ ಸಂಶಯ । ನಾಚಬೇಡೈ ॥ ೧ ॥ ನಾಳೆ ಸೂರ್ಯೋ ದಯಕೆ ನಿಮ್ಮಯ । ಮೇಳದಲಿ ಬಹೆ ಪಂಜಧೀಶನ । ಓಲಗವ ತೋರುವೆನು ನೂತನ । ಮಾಳಿಗೆಯಲಿ ॥ ೨ ॥ ಎನುತವರ ಸಂತೈಸುತಲಿ ನಿಶಿ । ಯನು ಕಳೆ ಯಲಾ ಪೂರ್ವಶೈಲದಿ । ದಿನಪನೆಸೆಯಲು ಚಂದುಗಿಡಿ ಬಲು । ಮನದೊ ಳುರ್ಬಿ ॥ ೩ ॥ ಕರೆದು ಬಿಲ್ಲಾಳುಗಳನೀರ್ವರ । ಧೊರೆಯ ದರುಶನಕೆನುತೆ ಕೂಡುತ । ಬರುತಿರಲು ಪೊಗಳಿದನು ಚೆನ್ನಯ । ಪುರದ ಸೊಬಗ ॥ ೪ ॥

ರಾಗ ಮಾರವಿ ಆದಿತಾಳ

ಅಣ್ಣ ನೀ ನೋಡು ದೇವಿಯ ಕಂದ । ಈ । ಬಣ್ಣದುಪ್ಪರಿಗೆಯ ಬಲು ಚಂದ ॥ ಬಣ್ಣಿಸಲಸದಳವಿದರಿಂದ । ಆ । ಪನ್ನಗಪತಿಗಾದವರು ಮುಂದ ॥ ೧ ॥ ಮುಗಿಲ ಮುಟ್ಟುವ ಗೋಪುರ ಪರಿಯ । ಈ । ಜಗದಿ ಮಿಂಚುವ ನಾರೀ ಮೊರೆಯು ॥ ಬಿಗಿದು ಕಟ್ಟಿದ ಕೋಟೆಯು ಪರಿಯು । ಮೇರು । ನಗದಂತೆ ಮಿಗಿ ಲವ ಬಲ್ಪಗೆಯು ॥ ೨ ॥ ಸುರರೊಡೆಯನ ಪುರಸುತೆಸೆವ । ಈ । ಧರಣಿಪ

ನಾಲಯುವೀ ಪುರವ ॥ ಪೊರೆವನ ಭಾಗ್ಯಕೆ ಮಿಗಿಲೆಲ್ಲಿ । ಕಾಣೆ । ಪರಿ ತೋಚಿಪುದು ಮನವೆನ್ನಲ್ಲಿ ॥ ೩ ॥

ಭಾಮಿನಿ

ಉತ್ತಮದ ಸೌಧಾಗ್ರ ಬಣ್ಣಿಸಿ । ಹತ್ತಿದರು ಸಚಿವನ ಸಮೇತದಿ । ಮತ್ತೆ ಕಂಡರು ನೃಪನ ಸೋಗಿಲಿ ಮೆರೆವ ಬಾಣಸಿಯು ॥ ಇತ್ತ ಕದವಿಕ್ಕಿದನು ಸಚಿವನು। ಕತ್ತಲೆಯು ಕವಿದಂತೆ ಮನೆಯೊಳು । ಸತ್ತ್ವಗುಂದಿದ ವೀರರನು ಮಾತಾಡಿಸಿದನಾಗ ॥ ೧ ॥

ರಾಗ ಕಾಂಭೋಜಿ ಏಕತಾಳ

ಬೆದರಲೇತಕಿಂದು । ಬಲು ಭಟ । ರಿದು ನಿಮಗಾಯ್ತೊಂದು ॥ ಅದುಭುತ ದರಮನೆ ಮುದವನೆ ತಾಳಿರಿ । ಸದೆಬಡಿವರು ನಿಮ್ಮುದರವ ಬಗಿಯುತ ॥ ೧ ॥ ಕೊಲೆಗಯ್ದಿಹ ನಿಮ್ಮ । ನಿಲ್ಲಿಯೆ । ಕೊಲೆಗಯ್ವರು ನಮ್ಮ ॥ ಬಲವಂತರು ನಿಮ್ಮೆಲುಗಳ ಮುರಿವರು । ನಿಲಿರಿಲ್ಲೆನುತಲೆ ತಲೆ ಮರೆಗೆಯ್ದನು ॥ ೨ ॥ ಚೋರ ತನದೊಳಾಗ । ಲರುಹುತ । ಸಾರಲತ್ತ ಬೇಗ ॥ ವೀರ ಕುಮಾರರು ಕಾರಾಗೃಹದೊಳು । ದಾರಿ ಕಾಣದಿರೆ ಭೂರಿ ಚಿಂತಿಸಲು ॥ ೩ ॥

ಭಾಮಿನಿ

ಎಲೆ ದುರಾತ್ಮನೆ ನುಡಿಯು ನಂಬಿಸಿ । ಕೊಲೆಗೆಳಸಿ ಮನ ಚೋರರಂದದಿ । ಸಿಲುಕಿಸುತ ಕದವಿಕ್ಕುತೈವರೆ ಪಾಪಿ ನಿನ್ನುವನು ॥ ನೆಲನು ಹೊರುವುದೆ ನೆಗಳೆ ದ್ವಿಜಕುಲ । ತಿಲಕನಾಡಿದುದಹುದು ಭಲರೇ । ನಿಲುಕದದು ನಿನ್ನಾಣೆ ಬಿಡು ಯೋಚನೆಯ ನೀನೆಂದ ॥ ೧ ॥ ಹೊಗಿಸಿ ಮೂಷಕ ವಸನದೊಳು ಬಲು । ಬಿಗಿದು ಕಟ್ಟಿದೊಡೇನು ಸಾರ್ಥಕ । ಜಗಳಗಲಿಯುಹುದಿದು ನಿರರ್ಥಕ ನಿನ್ನ ಕರ್ತವ್ಯ ॥ ಹಗೆತನವ ನೀ ಸಾಧಿಪಡೆ ಕಾ । ಳಗದಿ ಜಗ ನಗುವಂದವಿದು ಹೇ । ಡಿಗಳ ಗುರು ಖಳಕುಲ ವಿಭೂಷಣ ಭಲರೆ ನೀನೆಂದ ॥ ೨ ॥ ಇನ್ನಿದುವೆ ನಿನ ಗಂತ್ಯವೆಂದರಿ । ಬಣ್ಣಗಾರಿಕೆ ತೋರ್ದೆ ಶೇಷಗೆ । ಘನ್ನಘಾತಕಿ ಚರಿತೆಯುಸದಳ ನುಡಿಯೆ ಮಹದೇವ ॥ ಎನ್ನಲೇನಿದೆ ಪಡೆದವಳು ಸಂ । ಪನ್ನೆ ಕೀರ್ತಿಯು ಕುಲಕೆ ದುಃಖವ । ರಣ್ಯರೋದನವಾಯ್ತು ಫಲ ಪ್ರಾರಬ್ಧವಶವೆಂದ ॥ ೩ ॥

ರಾಗ ಸೌರಾಷ್ಟ್ರ ಝಂಪೆತಾಳ

ಕಳವಳಿಸದಿರು ಮನದಿ । ಛಲವಂತ ಕೇಳಿನ್ನು । ಫಲವೇನು ಮಾತಿನೊಳು । ಬಲು ಧೈರ್ಯ ತಾಳು ॥ ೧ ॥ ಬಲವಂತರಳುಕುವರೆ । ಬಂದ ಪರಿಭವಕೆಂದು ಸಲೆ ಯೋಚನೆಯನುಳಿದು । ಮುಂದೆ ಪೇಳಿದಕೆ ॥ ೨ ॥ ಎಂತಾದರೀ ವಿಧಿಯು।

ಮುಂತೆ ಮೀರುವ ಬಗೆಯ । ಚಿಂತಿಸುವೆನರೆಗಳಿಗೆ । ಶಾಂತ ಮನದೊಳಗೆ ॥ ೨॥ ಇರಲೆಂದೊರೆದು ಮುಂದೆ । ಪರಿಕಿಸುತೆ ಕದದೊಲವ । ಬರಿಗಾಲೊಳೊದೆಯೆ ಜ । ರ್ಝರಿತವಾಯ್ತುಂದೆ ॥ ೪ ॥ ಕೇಶ ತೇಜಕೆ ಪಣ್ಣ । ನಾಶೆಯೊಳು ನೆಗೆದೊಲಾ । ಕಾಶದಿಂದೆಮಳರಿಳೆ । ಗೋಸರಿಸದೈದೆ ॥ ೫ ॥ ಕಾನನವ ಪರಿಹರಿಸಿ । ಮಾನನಿಧಿಗಳು ನಿಶಿಯು । ಬೇನೆ ಇಲ್ಲದೆ ಕಳೆಯೆ । ಭಾನು ಮುಂದೆಸೆಯೆ ॥ ೬ ॥

ಭಾಮಿನಿ

ಊರ ಕಂಡವರುಬ್ಬಿ ಮನದೊಳು । ದಾರಿ ನಡೆದಾಯಾಸವನು ಪರಿ । ಹಾರಗೊಳಿಸುತಲಯ್ದಿದರು ಎಣ್ಮೂರ ಪುರವರಕೆ ॥ ದೂರದೊಳಗಿವರಾಗ ಮನ ಕಂ। ಡೂರವರು ಸತ್ಕರಿಸಲಿತ್ತಲು। ಶೂರ ದೇವೇಶ್ವರನು ವಿಭವದೊಳಿತ್ತನೋಲಗವ॥

ರಾಗ ಕೇದಾರಗೌಳ ಝಂಪೆತಾಳ

ಇತ್ತ ಸಂಭ್ರಮದೊಳಗೆ ಪೃಥ್ವಿಪಾಲನು ದೇವ । ನುತ್ತಮಾಸನದಿ ಕುಳ್ಳಿರಲು ॥ ಮತ್ತೆ ಪುರಜನರಯ್ದಿ ಬಿತ್ತರಿಸಿದರು ಭೂಪ । ಗುತ್ತಮಾಲೋಚನೆಯು ಭರದಿ ॥ ೧ ॥ ಭೂಮಿಪಾಲಕ ನಮ್ಮ ಸೀಮೆಗಯ್ದಿಹರು ನಿ । ಸ್ಸೀಮವಿಕ್ರಮಿಗಳೀರ್ವರನು ॥ ಪ್ರೇಮದೊಳು ಕರೆಸಿ ಸತ್ಕರಿಸಲ್ಕೆ ಜನಪದಕೆ । ಕ್ಷೇಮವಪ್ಪುದು ಮುಂದೆ ನಿಜವು ॥ ೨ ॥ ಬಲವಂತರಯ್ಯ ಖಳಕುಲಮಲ್ಲನನು ವಧಿಸಿ । ಛಲದಿ ಪೆರುಮಳನೂರ ತ್ಯಜಿಸಿ ॥ ಇಳೆಯಧಿಪ ಕೇಮರನ ಕೊಲೆಗೆ ತಪ್ಪಿಸಿ ತಲೆಯು । ಬಲದಿ ಮುರಿದರು ಚಂದುಗಿಡಿಯು ॥ ೩ ॥ ವಿರಚಿಸಿದ ಕಾರಾಗೃಹವನು ನಿಶಿಯೊಳಗೆ ನಡೆ । ತರೆ ಕಾಣುತುಪಚರಿಸುತವರ ॥ ಇರಿಸಿಕೊಂಡಿಹರೆಮ್ಮವರು ನಿನ್ನನುಜ್ಞೆಯನು । ಹರುಷದೊಳು ಬಯಸುತಿಹರಿಂದು ॥ ೪ ॥

ಭಾಮಿನಿ

ರಾಜಕುಲಮಣಿ ಕೇಳು ಬಾಲರ । ತೇಜವಗಣಿತವಿರ್ದರೆಮ್ಮಯ । ರಾಜ್ಯದೊಳು ಭಯವಿಲ್ಲ ಖಳ ಚೋರಾದಿ ದುರ್ಜನರ ॥ ಸಾಜವೀ ನುಡಿಯೆನಲು ಪೃಥಿವೀ । ರಾಜ ಸಂತಸವಾಂತನಾ ನೃಗ । ರಾಜನಂದದೊಳೆಸೆವ ಬಾಲರ ಕರೆಸಿದನು ಜವದಿ ॥ ೧ ॥

ರಾಗ ಸೌರಾಷ್ಟ್ರ ತ್ರಿವುಡೆತಾಳ

ಬೈದ್ಯಕುಲಚಂದಿರನೆ ಸಾಗರ । ಮಧ್ಯ ಬಡಬಾನಲನೆ ಸಾರಸ । ಶುದ್ಧಗುಣಯುತಚರಿತ್ತ ಬನ್ನಿರೆನು । ತಿರ್ದನಾಗ ॥ ೧ ॥ ಗುಣಕೆ ಮತ್ಸರವಿಲ್ಲ ನಿಮ್ಮನ । ಗಣಿತ ವಿಕ್ರಮರೆಂಬುದನು ನಾ । ನೆನೆಸಿ ಕರೆಸಿದೆನೋಲಗಕೆ ದು । ರ್ಗುಣಕುಠಾರ ॥ ೨ ॥ ಪೊಗಳದಿರು ಭೂಪಾಲ ಬರಿದೇ । ಬಿಗುಹಿನಪರಾವಲ್ಲವಂತಿರ ।

ಲೊಗತೆಗೊಂಡುದು ಮನವು ನಿನ್ನೀ । ಜಗದಿ ನಮಗೆ ॥ ೩ ॥ ಪಾಲಿಸೈ ಮನೆ ಯೊಂದ ಕರುಣದಿ । ಪಾಲಿಸೆಮ್ಮನು ಸಕಲ ದುರಿತದಿ । ಲೀಲೆಯೊಳು ನೆಲ ಸಿರುವ ಪರಿ ಭೂ । ಪಾಲವರ್ಯ ॥ ೪ ॥ ಹುಡುಕೆ ದುರ್ಲಭರಪ್ಪ ನಿಮ್ಮನು । ಬಿಡಲು ಮನವೆಲ್ಲಿಂದ ನಮ್ಮಯ । ಸಡಗರವ ಕೊಂಡಾಡುವಂದವ । ಬಿಡದೆ ನೀವು ॥ ೫ ॥ ಬಲಕೆ ಬೆಂಬಲವಾಗಿ ನಮ್ಮೀ । ವಲಯುವನು ರಕ್ಷಿಪ್ಪುದು ಭದ್ರದಿ । ಕಲಿಗಳೆಂಬುದ ಬಲ್ಲೆನಯನೂರ್ । ನಿಲಯುವಿತ್ತೆ ॥ ೬ ॥

ಭಾಮಿನಿ

ಇತ್ತೆ ನಿಮಗುತ್ತಮದ ನಿಲಯುವ । ನೆತ್ತಿ ಕೊಂಡಾಡಿಪ್ಪುದು ಕೀರ್ತಿಯ । ಮತ್ತೆ ಯೋಜನೆಯೇಕೆ ಪೋಗಿರೆನುತ್ತ ಕಳುಹಿದನು ॥ ಸತ್ತ್ವಶಾಲಿಗಳೀರ್ವ ರೊಂದೇ । ಚಿತ್ತದಲಿ ನಡೆತಂದರಯನೂರ್ । ಗುತ್ತಿನೊಳಗಿರುತಿರಲು ಸಂದುದು ವರುಷವಿಂತೆರಡು ॥ ೧ ॥

ಕಂದ

ಇಂತೀ ಪರಿಯೊಳಗಿರುತಿರೆ । ಸಂತಸದೊಳ್ ಬಾಲರತ್ತ ಬೇಸರ್ಕಳೆಯಲ್ ॥ ಚಿಂತಿಸುತ್ತೆ ಬೇಟೆಯ ಮುದ। ದಿಂ ತರಿಸುತೆ ವ್ಯಾಧಮಾರ್ಬಲಂ ಪೊಗೆ ವನಮಂ॥

ರಾಗ ಮಾರವಿ ಏಕತಾಳ

ಬೇಟೆಗೆನುತ ಬಂದರಾಗ । ಸೇನೆಯ ಕೂಡಿ । ಬೇಟೆಗೆನುತ ಬಂದರಾಗ ॥ ॥ ಪ ॥ ಕತ್ತಿಗಳನೆ ತಿರುಹುತ್ತ । ಈಟಿಗಳಿಂದ । ಲೊತ್ತಿ ಪೊದೆಯನು ತೂಗುತ್ತ ॥ ಸುತ್ತಿ ಮರಂಗಳನೊತ್ತಿ ಮೃಗಂಗಳ । ಕುತ್ತಿ ಕೆಡಹಿ ಮುಂದೊತ್ತಿ ಸೇನೆಯನು॥ ॥ ೧ ॥ ಓಡುವ ಚಮರಿಯ ಬೆಂಬತ್ತಿ । ಮರೆಯೊಳು ನಿಂದು । ಕಾಡುಕೋಣ ಗಳನೆ ಮುತ್ತಿ ॥ ಮೋಡಿತನದ ಕೆಂಗಣ್ಣ ಮರೀಚಿಯ । ಝಾಡಿಸಿ ಬಲು ಹತಿ ಮಾಡುತ ವೀರರು ॥ ೨ ॥

ಭಾಮಿನಿ

ಮುಂದೆ ನಡೆದಾ ಕಥನ ಕೇಳ್ ಬಳಿ । ಕೊಂದು ವೃಕ್ಷದ ಮೂಲದಿಂ ಬಿಲ । ದಿಂದ ದಂಷ್ಟ್ರಗಳೆರಡು ಕೂರಲಗಂತೆ ಕಂಠಿಗಳು ॥ ಪೊಂದಿರಲು ಸರ್ವಾಂಗ ದೊಳು ಪೇ । ರ್ಪಂದಿಯಾರ್ಭಟಿಸಲ್ಕೆ ದಿಗ್ಭ್ರಮೆ । ಪೊಂದಿತಾ ಬಲ ಚೆನ್ನ ಮುಂದೊತ್ತಿದನು ತತ್ಕ್ಷಣದಿ ॥ ೧ ॥

ರಾಗ ಭೈರವಿ ಏಕತಾಳ

ಚಿತ್ರರಥರ ತೆರದಿ । ಸೇನೆ ವಿ । ಚಿತ್ರದೊಳಿರೆ ಜವದಿ ॥ ಪತ್ರದಳಾಕ್ಷನ ಮನ ದೊಳು ನುತಿಸಿ ವಿ । ಚಿತ್ರಚರಿತ್ರನು ಶಸ್ತ್ರವ ತೆಗೆದನು ॥ ೧ ॥ ಹರ ವಾಹನ

ನಂತೆ । ಭೂಮಿಯು । ಪೊರೆದ ವರಹನಂತೆ ॥ ಗಿರಿಭೇದನ ಸೂಕರ ಮುಂದೊ
ತ್ತುತ । ಬರೆ ಬಾಯೊಳು ಪೊಗಿಸಿದ ಕೊರಸಿಯನು ॥ ೨ ॥ ಬಿಸಿ ರಕ್ತವ ಕಾರಿ ।
ಬಳಲುತ । ವಶಗೆಟ್ಟಿತು ಚೀರಿ ॥ ಉಸಿರಿದರೆಲ್ಲರು ಧನ್ಯಳು ದೇವಿಯು । ಬಸಿ
ರಿಲಿ ಬಂದವಗೆಣೆ ಯಾರೆನುತಲಿ ॥ ೩ ॥

ಭಾಮಿನಿ

ಪೊಗಳುತಿರಲೀ ಪರಿಯೊಳಿತ್ತಲು । ಮಗುಳೆ ನಡೆದಾ ಕಥನ ಕೇಳ್ಕೈ । ಜಗ
ದೊಡೆಯು ಪೆರುಮಳನ ಬಲ ಮುತ್ತಲ್ಕೆ ಚೆನ್ನಯುರ ॥ ಜಗಳಗಲಿಗಳ ಕಂಡು
ನುಡಿದರು । ಮಿಗೆ ಖತಿಯು ತಳೆದಾಗ ಬಲು ಭಟ । ರುಗಳು ಮುಂದೊತ್ತುತ
ಲಿಹರ ತಡೆದಾ ತತುಕ್ಷಣವೆ ॥ ೧ ॥



ರಾಗ ನೀಲಾಂಬರಿ ಏಕತಾಳ

ಯಾರೆಲಾ ನಿಷಾದರಂತೆ । ಭೂರಿ ಕೊಬ್ಬಿನಿಂದ ನಮ್ಮ । ಧಾರಿಣಿಪನ ವನವ
ಪೊಕ್ಕು । ಸೂರೆಗೈವರು ॥ ನೀರಜನ್ಯ ನಾಮದೊಳು ಕ । ಕಾರ ಪೋಗಲುಳಿದ
ಪೆಸರ । ಧಾರಿಣೀಶನಾಣ್ಮನೆಮಗೆ । ಸಾರಿ ಜತನದಿ ॥ ೧ ॥ ಭಳಿರೆ ಪುಣ್ಯಪುರುಷ
ಬಲ್ಲೆ । ನಿಳಯುಕಧಿಪ ಪಂಜಪತಿಯು । ಕೊಲೆಗೆ ಮನವ ಮಾಡಿದವನ । ನಿಳೆಯ
ಧರಿಪಳೆ ॥ ಸುಲಭವಲ್ಲ ಕೇಳು ತಲೆಯ । ಕೊಲುವ ಖಡುಗವೀಕ್ಷಿಸೆಂದು ।
ಛಲದಿ ತಿರುಗಲಾಗಲಸಿಯು । ಪೊಳೆಯುತಿರ್ದುದು ॥ ೨ ॥ ತ್ರಾಣವಿರ್ದರೀಗ
ನಿಮ್ಮ । ಜಾಣತನವ ತೋರಿರೆನುತ । ಬಾಣಮಳೆಯ ಕರೆಯೆ ಭಟರ । ಶ್ರೇಣಿ
ಯೊದರಲು ॥ ಕಾಲನಂತೆ ಬಂದು ಚೆನ್ನ । ಕೋಲುಗೊಂಡನೇನ ಪೇಳ್ವೆ । ಜಾಲ
ಗೋಡಿ ತಿರುಗಿತಾಗ । ಬಾಳ ಹತಿಯಲಿ ॥ ೩ ॥

ಭಾಮಿನಿ

ಈ ತೆರದಿ ಕಲಿ ಭಟರ ನಿಚಯುವ । ಘಾತಿಸುವ ಸೂಕರವನೆಳೆದೊ । ಯ್ದಾ
ತತುಕ್ಷಣ ನಡೆಯಲಿದ ಕಾಣತ್ತ ಮನಮರುಗಿ ॥ ಸೋತವರು ನಡೆತಂದು
ಪಂಜಾ । ನಾಥನೋಲಗ ಪೊಕ್ಕು ಕದನದ । ರೀತಿಯನು ಬಿನ್ನೈಸಿದರು ಹಂಬ
ಲಿಸಿ ಭಯದೊಳಗೆ ॥ ೧ ॥

ರಾಗ ಸಾವೇರಿ ಆದಿತಾಳ

ಸಲಾಮು ತಕ್ಕೊ ಪಂಜಪುರೇಶ । ಸಲಾಮು ರಿಪುಗಿರಿಹೀರ ॥ ಸಲಾಮು
ಲಿಸು ನಮ್ಮೊಡೆಯನ ಕಡೆ । ಗುಲಾಮರೆಸಗಿದ ಕಾರ್ಯ ॥ ೧ ॥ ತುಪ್ಪೆ
ಡಿನೊಳಗೆ ಬೇಟೆ । ತಪ್ಪದೆ ಗೈದಿಹರು ಮತ್ತೆ ॥ ತಪ್ಪು ಒಪ್ಪು ನಾವರಿಯೆವು

ತಡೆಯಲು । ಧೊಪ್ಪನೆ ಬಡೆದೋಡಿಸಿದರು ಭೂಪ ॥ ೨ ॥ ಒಡೆಯ ದೇವ ರಾಜನಂತೆ । ಕಡೆಯ ಖೂಳರು ಕೇಳ್ಕೃತ್ತೆ ॥ ಹುಡುಗರು ಕೇಳೀರ್ವರು ಸಮ್ಮೆ ಲುಗಳ । ಪ್ರಡಿಗೈದರು ಮುಡುಕಿದರು ಪರಾಕೆ ॥ ೩ ॥ ಹಂದಿಯ ಸೇವದಿಂದವರು ಬಂದು । ಕೊಂದರು ಮಾರ್ಬಲವನಿಂದು ॥ ಎಂದರು ಚೆನ್ನಯ ಕೋಟಿಯು ಪೆಸರೆನು । ತಿಂದು ಬಡೆದು ನೂಕಿದರು ಪರಾಕೆ ॥ ೪ ॥

ಭಾಮಿನಿ

ನುಡಿಯನಾಲಿಸುತಾಗ ಕೇಮರ । ಬಿಡದೆ ಹುಂಕರಿಸಿದನೆಲವೊ ನೀವ್ । ನುಡಿದ ಕಥನ ವಿಚಿತ್ರ ಬಿಡುವೆನೆ ಖಳರನೀ ಕ್ಷಣದಿ ॥ ಬಡೆಯುತಾಶ್ರಯದಾತ ದೇವನ । ಹಿಡಿದು ಬಂಧಿಸದಿರ್ದೆನಾದರೆ । ಪೊಡವಿಗಧಿಪನೆ ನೋಡೆನುತ್ತಾ ಸಚಿವಗಿಂತೆಂದ ॥ ೧ ॥

ರಾಗ ಬಿಲಹರಿ ಏಕತಾಳ

ಮಂತ್ರಿವರನೆ ಕೇಳು । ದೇವನಿ । ಗಂತ್ಯವಾಯಿತು ಬಾಳು ॥ ತಂತ್ರಗಾರರಾ ಖೂಳರಿಗಾಶ್ರಯ । ವಿಂತಾದುದೆ ನೀ ಚಿಂತಿಸು ಯೋಚನೆ ॥ ೧ ॥ ಚೋರತನ ದೊಳಂದು । ನಿಶಿಯೊಳು । ಜಾರಿಪೋದರೆಂದು ॥ ವಾರತೆ ಕೇಳಲು ಖತಿ ಯಾಂತುದು ಮನ । ಪ್ರೋರರುಪದ್ರವನಿತ್ತಪರೆಂಬುವ ॥ ೨ ॥ ಕೇಳಿ ಸಹಿಸ ಲಾರೆ । ಭೂಪಗೆ । ಪೇಳಿ ಕಳುಹು ಸಾರಿ ॥ ಪಾಳುಗೈದರೆಂತೆಮ್ಮೀ ವನವನು । ಖೂಳರನೀ ಕ್ಷಣ ಒಡಿದಿತ್ತಪ್ಪುದೆನೆ ॥ ೩ ॥ ಅಲ್ಲದಿರಲು ರಣದಿ । ಕಾದಲು । ನಿಲ್ಲಲಿ ಸತ್ವರದಿ ॥ ಖುಲ್ಲರ ಕೂಡುತೆ ದೇವನು ಬರಲೆಂ । ದೆಲ್ಲವ ಲೇಖಿಸಿ ಕಳು ಹಿಸು ಚಾರರ ॥ ೪ ॥

ಭಾಮಿನಿ

ಕೇಳಿ ಸಂತಸವಾಂತು ಸಚಿವನು । ಓಲೆ ಕಳುಹಲು ಚಾರರಾ ಕ್ಷಣ । ತಾಳ ದಯ್ಯುರಲಿತ್ತ ದೇವೇಶ್ವರನು ವಿಭವದಲಿ ॥ ಓಲಗದೊಳಿರೆ ಕಂಡು ಲಿಖಿತವ । ಲೀಲೆಯೊಳಗಿತ್ತಾಗ ವಂದಿಸೆ । ಭೂಲಲಾಮನು ವಾಚಿಸೆಂದೀಯಲ್ಕಮಾತ್ಯ ನೊಳು ॥ ೧ ॥

ವಾರ್ಧಿಕ

ರಸೆಯೊಳಗೆ ಪೆಸರಾಂತ ವಸುಧೀಶ ಕೇಮರನು । ಅಸಮವಿಕ್ರಮಿ ದೇವರಸ ನಿಂಗೆ ಸಂತಸದಿ । ಕುಶಲವನು ತಿಳುಹಿ ಬರೆಯಿಸಿದೋಲೆ ತವ ಸೈನ್ಯವೆಸಗಿದ ಕೃತವನೆ ತಿಳಿದು ॥ ವಶವಿಲ್ಲದಂತೆ ನಮ್ಮವರ ಶಿಕ್ಷಿಸಿ ಬೇಟೆ । ಯೆಸಗಿರ್ದ ವೀರ ರೀರ್ವರ ಕಳುಹದಲ್ಲದಿರೆ । ಎಸಗುವರೆ ಕಾಳಗಕೆ ಸನ್ನದ್ಧರಾಗಿ ಬರಲಸುಗೊಂಬೆ ವೆಸಗುಚಿತವ ॥ ೧ ॥

ರಾಗ ನೀಲಾಂಬರಿ ಆದಿತಾಳ

ಸಾಮವೋ ಸಂಗ್ರಾಮವೋ ಮುಂ । ದೇನು ದೇವರಾಯ ॥ ಭೀಮ ವಿಕ್ರಮಿಗಳ ಕೇಳಿ । ಬೇಗದಿ ಹೇಳಯ್ಯ ॥ ೧ ॥ ತಂಟೆಕೋರರಯ್ಯ ಬಲದ । ಬಂಟ ಕೋಟಿ ಚೆನ್ನ ॥ ನೆಂಟು ಬೇಡ ಕಳುಹು ನಿನ್ನ । ನೆಂಟನಲ್ಲೊ ನಮ್ಮ ॥ ೨ ॥ ಭೂಪಗಹಿತ ಮಾಡಬೇಡ । ಕೋಪ ತಡೆಯಲಾರ ॥ ಕಾಪುರುಷರಿವರ ಕಳುಹು। ಪಾಪಿಗಳನು ಬೇಗ ॥ ೩ ॥ ಕಟ್ಟು ನಿನ್ನ ರಟ್ಟೆಯನ್ನು । ಕುಟ್ಟೋ ದವಡೆಗೆನುತ ॥ ಮುಷ್ಟಿಯಿಂದ ಹೊಯ್ದು ರಾಗ । ದಿಟ್ಟರೆದ್ದು ಬೇಗ ॥ ೪ ॥ ವೋರೆಗೆ ಸುಣ್ಣವನಿಟ್ಟು । ಪೋರ ಪೋಗು ಬೇಗ ॥ ದೂರ ಪೇಳು ನಿನ್ನಪ್ಪಗೆಂ । ದಾರುಭಟಿಸಲಾಗ ॥ ೫ ॥ ಸಾಕು ನಿನ್ನ ತಂಟೆ ನಮಗಿ । ನ್ನೇಕೆನುತ್ತ ಬಂದ ॥ ಜೋಕೆಯಿಂದಲೆರಗುತ ಪ । ರಾಕೆ ನೀ ಕೇಳೆಂದ ॥ ೬ ॥

ರಾಗ ಮಾರವಿ ಏಕತಾಳ

ಬರೆದ ಲಿಖಿತ ಕೊಟ್ಟೆನಯ್ಯೊ । ಪಂಜಾಧೀಶ ॥ ದೇವ । ವರ ನೃಪಾಲ ಶ್ರೇಷ್ಠನಯ್ಯ । ಪಂಜಾಧೀಶ ॥ ಧೀರ ಸಚಿವ ವಾಚಿಸಲ್ಕೆ । ಪಂಜಾಧೀಶ । ಕೇಳಿ । ಧಾರಿಣೀಶ ಮೌನ ತಾಳ್ದ । ಪಂಜಾಧೀಶ ॥ ೧ ॥ ಕಷ್ಟವಾದುದೆಂದು ನುಡಿದ । ಪಂಜಾಧೀಶ । ಕಾರ್ಯ । ಇಷ್ಟರೊಳಗೆ ಕಲಹವೆಂದ । ಪಂಜಾಧೀಶ ॥ ಅಷ್ಟರೊಳಗೆ ಬಿಲ್ಲ ಪೋರ । ಪಂಜಾಧೀಶ । ರೀರ್ವ । ದುಷ್ಟರವಗೆ ಭಾಷೆ ಕೊಡಲು । ಪಂಜಾಧೀಶ ॥ ೨ ॥ ಬಂದುದ ಕಾಂಬೆವೆಂದರು । ಪಂಜಾಧೀಶ । ದುರುಳ । ರಂಜಲಿಲ್ಲ ಲಿಖಿತಕವರು । ಪಂಜಾಧೀಶ ॥ ಮುಂಜುಪೆರ್ಗಡೆಯು ಪುಂಡ । ಪಂಜಾಧೀಶ । ನಿಮ್ಮ । ಪಂಜಪತಿಯು ಬರಲಿಯೆಂದ । ಪಂಜಾಧೀಶ ॥ ೩ ॥ ತಂಟೆಕೋರರಯ್ಯ ಲಿಖಿತ । ಪಂಜಾಧೀಶ । ಎನ್ನ । ಕಂಠಕೆ ಕಟ್ಟಿದರಲ್ಲೊ । ಪಂಜಾಧೀಶ ॥ ಬಂಟರೆನ್ನ ವೋರೆಗೆಲ್ಲ । ಪಂಜಾಧೀಶ । ಉಗುಳಿ । ಸೊಂಟಕೊದೆದು ಕಳುಹಿದರು । ಪಂಜಾಧೀಶ ॥ ೪ ॥ ಯುದ್ಧಕೆ ಸನ್ನದ್ಧರಾಗಿ । ಪಂಜಾಧೀಶ । ಇರ್ವ । ಬುದ್ಧಿವಂತರೆಂದು ತಿಳಿದೆ । ಪಂಜಾಧೀಶ ॥ ಬದ್ಧವಾಗಿ ನುಡಿವೆ ನಿಮಗೆ । ಪಂಜಾಧೀಶ । ಅವರ । ಸುದ್ದಿ ಬೇಡವಯ್ಯ ನಮಗೆ । ಪಂಜಾಧೀಶ ॥ ೫ ॥

ಭಾಮಿನಿ

ನೂಕಿರೆಲವೋ ಪಾತಕಿಯನಿವ । ನಾಕೆವಾಳರ ಪೊಗಳುತಿಹ ಭಯ । ಸೋಕಿತವಗೆಂದೆನುತ ಸಚಿವರ ನೋಡಿ ನಗುತೆಂದ ॥ ಆ ಕುಚೇಷ್ಟರ ಕಾಳಗಕೆ ಬಲ ನೀಕರೆಸು ಪೆರುಮಳಗೆ ಲಿಖಿತವ । ಜೋಕೆಯೊಳು ಬರೆಸೆಂದು ಕೊಟ್ಟನನುಜ್ಞೆ

ಯನು ಜವದಿ ॥ ೧ ॥ ಶೂರ ಕೇಮರನೊಲಕೆ ಪೆರುಮಳ । ಭೂರಿ ಬಲ ಕೂಡುತ್ತ ಬರೆ ಬಲು । ಶೂರಮಂತ್ರೀಶ್ವರನು ನೆರಹಿದನಮಿತ ಬಲ ರಣಕೆ ॥ ಆರುಭಟೆಯೊಳು ಪೊರಟು ರಣಸಂ । ಭಾರ ಸಹಿತಯ್ತಂದು ಬಿಡದಿಯು । ನೇ ರಚಿಸಿ ರಣವಾರತೆಯ ಕಳುಹಿಸಿದನಹಿತರಿಗೆ ॥ ೨ ॥

ರಾಗ ಕೇದಾರಗೌಳ ಏಕತಾಳ

ಕೇಳಯ್ಯ ದೇವರಾಯ ನೀನು । ನಾನೆಂಬುದನ್ನು । ಕೇಳಯ್ಯ ದೇವರಾಯ ನೀನು ॥ ಪ ॥ ಒಡೆಯ ಕೇಮರಭೂಪ ತಾನು । ಪಡೆಗಳ ಕೂಡಿ । ಒಡನೆ ಬಂದಿಹ ಮಂತ್ರೀಶ್ವರನು ॥ ಸಡಗರದಿಂದಲಿ ರಣಕನುವಾಗಿಯೆ । ಕಡು ಜವ ದಲಿ ಬರಹೇಳೆನುತಟ್ಟಿದ । ಪೊಡವೀಶನೆ ನೀ ಯೋಚಿಸದಲೆ ಪೊರ । ಮಡು ಬೇಗನೆ ಬಲು ತಡವೇತಕೆ ಪೇಳ್ ॥ ೧ ॥

ರಾಗ ಮಾರವಿ ಅಷ್ಟತಾಳ

ಯುದ್ಧದುತ್ಸವ ಕಾಂಬರೆದ್ದು ಬಪ್ಪುದು ನಾಳೆ । ಮಂತ್ರಿ ಕೇಳು ॥ ಬಲು । ಬುದ್ಧಿವಂತರ ಕೂಡಿ ಸಿದ್ಧರಿಪ್ಪುದೆ ಮುಂದೆ । ಮಂತ್ರಿ ಕೇಳು ॥ ೧ ॥ ಜಾತ ಶತ್ರುವ ಗೆಲ್ವರೋತು ಬಪ್ಪರ ಕಂಡು । ಮಂತ್ರಿ ಕೇಳು ॥ ನಯ । ಮಾತಿಲಿ ಮನ್ನಿಸಿ ಕರತಪ್ಪುದೀಗಳು । ಮಂತ್ರಿ ಕೇಳು ॥ ೨ ॥ ದಂಡಿಗಯ್ತಪ್ಪರ ಹೆಂಡರಿ ಗೋಸುಗ । ಮಂತ್ರಿ ಕೇಳು ॥ ಎನ್ನ । ಭಂಡಾರವ ಸೂರೆಗೊಳಿಸು ಯೋಚಿಸ ದಿಂದು । ಮಂತ್ರಿ ಕೇಳು ॥ ೩ ॥

ಭಾಮಿನಿ

ಕಾಳಗಕೆ ಕಲಿಭಟರ ನಿಚಯವು । ಬೀಳುಗೊಡಲೋಸುಗವೆ ದೇವ ಬ । ಲ್ಲಾಳನೀಯಲು ಸೇಸೆಯೊಡೆತನ ವೀರ ಚೆನ್ನಯಗೆ ॥ ನಾಳೆ ಮಾರ್ಗೇಶ್ವರದ ಶುಕ್ಲದಿ । ಏಳಕೊಂದುಳಿವನ್ನೆಗಹಿತರ । ಜಾಲಕಭಿಮುಖವಾಗಿ ಕದನವ ಹವಣಿ ಸೆಂದೆನುತ ॥ ೧ ॥ ಹರಿಯು ಮೂಡಣ ಗಿರಿಯೊಳೆಸೆಯಲು । ಹರಿಯ ಪೆಸರಿನ ಹರಿಬಲಾನ್ವಿತ । ವರದೆಯಾಳ್ದನ ನುತಿಸಿ ಧಾರಿಣಿಪಾಲಗಭಿನಮಿಸಿ ॥ ಗುರು ಹಿರಿಯರಿಂಗೆರಗಿ ಮನದೊಳು । ಸ್ಮರಿಸಿ ಮನದೇವತೆಯ ತನ್ನಯ । ಹಿರಿಯ ಸಹಿತಲಿ ಸೇನೆ ಹರಿಸಿದನರಿಯ ಸಮ್ಮುಖಕೆ ॥ ೨ ॥ ಚಂಡಬಲರಯ್ತರುತ ತಮ್ಮಯ । ಮಂಡಲಿಗೆ ಬಿಡದಿಗಳ ರಚಿಸುತ । ಕಂಡು ಕರೆದನು ಮಂಜು ಪೆರ್ಗಡೆ ಎನಿಪ ವೀರನನು ॥ ಗಂಡುಗಲಿ ನೀ ಧುರಕೆ ಬಂದಿಹ । ಭಂಡ ಮಂತ್ರಿಯ ಜಯಿಸು ಪೋಗೆನೆ । ಹಿಂಡನಿಂದುಳುಹುತ್ತ ಪೆರ್ಗಡೆ ಕದನಕನುವಾದ ॥ ೩ ॥

ರಾಗ ತೋಡಿ ಮಟ್ಟೆತಾಳ

ಚಂದುಗಿಡಿಯೆ ನಿಲ್ಲೆಲ್ಲಿ ಶರದ । ಚಂದ ತೋರ್ಪೆ ಧುರದಿ ನಿನ್ನ । ಅಂದ ಗೆಡಿಸುವಂತ ಪರಿಯು । ನಿಂದು ನೋಡೆಲಾ ॥ ೧ ॥ ಜಾಣ ಮಂಜುಶ್ರೇಷ್ಠಿ ಕೈಯು । ಬಾಣ ತಲೆಯು ಕೊಂಬ ಪರಿಯು । ಕಾಣುವಂತೆ ಗೈವೆ ಭಟರ । ಶ್ರೇಣಿ ನಿನ್ನಯು ॥ ೨ ॥ ಬಾಲರೀರ್ವರನ್ನು ನೋಡಿ । ಜಾಲತನದಿ ಪಿಡಿಯಲೆಂದು । ಕಾಲ ಸಾಧಿಸಿದವ ಕರುಳ । ಮಾಲೆ ತೆಗೆವೆನು ॥ ೩ ॥ ಉಂಡ ಕೂಳ ಋಣವ ತೀರ್ಚೆ । ಭಂಡ ಬಗುಳಬೇಡ ರಣದಿ । ಚಂಡತನವ ತೋರೆನುತ್ತ । ಲೆಚ್ಚ ಬಾಣವ ॥ ೪ ॥ ಕಡಿದು ಪೂಡೆ ಶರಕೆ ಪ್ರತಿಯು । ಬಿಡದೆ ಚಂದುಗಿಡಿಯು ಕಣದಿ । ಕಡಿದನಾಗ ಶರವ ಮಂಜು । ಪೊಡವಿಗೊರಗಿದ ॥ ೫ ॥

ರಾಗ ಮಾರವಿ ಏಕತಾಳ

ಕುಂಜರವದನನು ವೀರನು । ಮಂಜಯುಪೆರ್ಗಡೆ ಧುರದೊಳು । ಭಂಜಿತ ನಾಗಲು ಕಾಣುತ । ಲಂಜಿದ ಮಾರ್ಬಲವು ॥ ೧ ॥ ಓಡುತಲಿಹ ಪರಿಯನು ತಾ । ನೋಡುತ ಚೆನ್ನಯು ತವಕದಿ । ಮಾಡಿದ ಕೈಸನ್ನೆಯು ನೀ । ಡಾಡಿರಿ ಭಯ ವೆನುತ ॥ ೨ ॥ ಕಟ್ಟಾಳುಗಳೆಲ್ಲರು ಭುಜ । ತಟ್ಟುತ ಸಮರವನೆಸಗಲು । ಮೆಟ್ಟುತ ಮುರಿವೆನಹಿತರ । ದಿಟ್ಟಸಿ ನೀವೆಂದ ॥ ೩ ॥ ಶೂರರು ರಣದೊಳಗೋಡುತ । ಭೀರುಗಳಾಪಿರೆ ರಣ ಚಮು । ತ್ಕಾರವ ಪರಿಕಿಸಿ ಜಯುವನು । ಸೂರೆಯು ಗೈಯು ವೆನು ॥ ೪ ॥ ಎಂದುರೆ ಧೈರ್ಯವನರುಹುತ । ಮುಂದೊತ್ತುತಲಿಹ ಪಟುಭಟ । ಚಂದುಗಿಡಿಯು ತಡೆದಲ್ಲಿಯೆ । ಸಂಧಿಸಿದನು ಧುರದಿ ॥ ೫ ॥

ರಾಗ ಕಾಂಭೋಜಿ ಅಷ್ಟತಾಳ

ಹುಲುಸಚಿವನೆ ನಮ್ಮ ಬಲವ ಮುರಿದೆನೆಂದು । ಬಲು ಗರ್ವ ತಾಳದಿರು । ನಿಲಿಸುವೆನರೆಕ್ಷಣದೊಳಗೆ ಪಿತ್ತವು ಬಲು । ತಲೆಗೇರಿಕೊಂಡಿಹುದು ॥ ೧ ॥ ಬೈದ್ಯ ಶಿರೋಮಣಿ ಬಂದೆಯು ಸರಿಸಕೆ । ವೈದ್ಯನು ನೀನಹುದೈ ॥ ಯುದ್ಧದಿ ತರಿಯುವ ನಿನ್ನ ದೇಹವನಿಂದು । ಮದ್ದಿನಿಂದಲಿ ಮಾಣಿಸೈ ॥ ೨ ॥ ಜಾತಿವೀರನು ನಿನ್ನ ರೀತಿ ಬಲ್ಲೆನು ಘನ್ನ । ಘಾತಕಿ ಹಿತವ ತೋರಿ ॥ ಈತನೆ ನೃಪನೆಂದು ಕಳುಹಿ ಕೀಲಿಸಿ ಕದ । ಪಾತಕಿಯೋಡಿದೆಲೈ ॥ ೩ ॥ ಇದ್ದೂರ ಹಗೆ ಬಲು ಬುದ್ಧಿವಂತನು ಮಲ್ಲ । ಬುದ್ಧಿವಂತನ ವಧಿಸಿ ॥ ಸುದ್ದಿಯಿಲ್ಲದ ಹಾಗೆ ಕದ್ದೋಡಿದವ ಪಾಪಿ । ಶುದ್ಧಿ ಗೆಯ್ವೆನು ಧುರದಿ ॥ ೪ ॥ ಗುಣವಂತನನು ಸೇರಿ ಗಣಿಕ ತಾನೆನುತಲೆ । ಹಣವಪ ಹರಣ ಗೆಯ್ದು ॥ ಎಣಿಸುತೆಲ್ಲರ ಬಾಳ್ಗೆ ನೀರ ಚಾಡಿಯು ಪೇಳ್ವ । ಗಣಿಕ ಹೆಗ್ಗಣಕ ಕೇಳು ॥ ೫ ॥ ಬಿಲ್ಲರವನು ನೀನು ಬಲ್ಲಿದನಾಪೆಯು । ಸೊಲ್ಲಲಿಹುದೆ ಫಲವು ॥

ಎಲ್ಲಿ ನಿನ್ನಯ ತಾಯಿ ತಂದೆ ಯಾರೆಂಬುದ । ಬಲ್ಲೆಯ ಪೇಳೆಂದನು ॥ ೬ ॥ ಹುಟ್ಟು ಕೆಣಕುತಿಂದು ಸಿಟ್ಟನೇಳಿಸಲಾಗಿ । ಭ್ರಷ್ಟ ನಿನ್ನಯ ಶಿರವ ॥ ಕುಟ್ಟಿ ಧುರದಿ ನಿನ್ನ ಮೆಟ್ಟಿ ಮುರಿವ ಪರಿ । ದಿಟ್ಟಿಸುವರು ಜನರು ॥೭॥ ಅಲ್ಲದಿರಲು ನೀನೆಲ್ಲಿಯು ಪೋರನು । ಬಲ್ಲೆ ನಿನ್ನಯ ಕುಲವ ॥ ಬಲ್ಲಿದ ಬಲವಂತನಾದರೆ ಪರಿಕಿಸು । ಬಿಲ್ಲಿನ ಸಾಹಸವ ॥ ೮ ॥ ತೆಗೆ ತೆಗೆ ನಿನ್ನಯ ಬಿಗುಹಿನ ಬಾಣವ । ಸೊಗಸ ಪರೀಕ್ಷಿಪೆನು ॥ ಬಗೆವೆನೆ ಕೂರಸಿ ಕೈಯೊಳಿರಲು ನಿನ್ನ । ಬಗಿಯುವೆನುದರವನು ॥ ೯ ॥

ಭಾಮಿನಿ

ಸಮರದೊಳು ಸಮದಂಡಿ ಯಾರಿವ । ಗಮಿತ ವಿಕ್ರಮಿಯಲ್ತೆ ಧುರದೊಳು। ಸಮತೆಯೊಳು ಗೆಲುವೊಡೆ ಬರಿಯ ಬಯಲಾಸೆ ದಿಟವೈಸೆ ॥ ಭ್ರಮಣೆ ಯಾಂತುದು ಮನವು ಖಲ । ಸಮರವೇ ಹೊರತಲ್ಲದಿಲ್ಲವು । ದಮನಕುಪಕೃತಿ ಯನ್ಯರನುವಿಲಿ ಗೆಲುವೆ ತಾನೆಂದ ॥ ೧ ॥

ರಾಗ ನವರೋಜು ಆದಿತಾಳ

ಓಹೋ ಸಂಗರಶೂರ । ಖಳ । ಸಾಹಸಿಯೈ ಬಲು ಚೋರ ॥ ಆಹವದೊಳ ಗಂಜಿ । ಬಾಹು ತರಿಯಲೆಂದು । ಜೀವಘಾತಕಿ ನಿಂದೆ । ಕಾಹುರದೊಳು ಹಿಂದೆ ॥ ॥ ೧ ॥ ಅಕ್ರಮದಿ ಜೈಸುವೆನೆ । ಬಲು । ವಿಕ್ರಮಿ ಲೋಕದಿ ನೀನೆ ॥ ನಕ್ರನ ಗುಣದ ಪ । ರಾಕ್ರಮಿಯೆಂಬುದ । ವಕ್ರೋಕ್ತಿಯೊಳ್ ದ್ವಿಜ । ನೆಂದ ನುಡಿಯು ಖರೆ ॥ ೨ ॥ ಬರಿಸೀಗ ಕೇಮರನ । ನೀ । ಕರೆ ಶಿರ ಕಾಯ್ವವನ ॥ ಬರಿದೇತಕೆ ನಿಂದು । ಮರುಗುವೆ ಕದನದಿ । ಕರಚಮತ್ಕೃತಿ ಕಾಣೆಂ । ದೆರಗಿದನಾ ಕ್ಷಣ ॥ ॥ ೩ ॥ ಕಾರಿದ ರಕ್ತವನಾಗ । ಮೇ । ಲೇರಿತು ಪ್ರಾಣವು ಬೇಗ ॥ ವೀರ ಮಂತ್ರೀ ಶ್ವರ । ನೇರಲು ಯಮಪುರಿ । ಜಾರಿತು ಸೇನೆಯು । ಘೋರನೆ ದಿಗಿಲೊಳು ॥

ಭಾಮಿನಿ

ಚಂದುಗಿಡಿಯೊರಗಲ್ಕೆ ಕಣನೊಳು । ಮಂದಿ ಮಾರ್ಬಲ ತಿರುಗೆ ದಿನಮಣಿ । ಕಂದಿದನು ಕಾರ್ಗತ್ತಲಾವರಿಸಲ್ಕೆ ಕೇಮರನು ॥ ನೊಂದು ಮಮ್ಮಲ ಮರುಗೆ ದೇವೀ । ಕಂದರಿತ್ತಲು ದಿನದುದಯದೊಳು । ಮಿಂದು ಶೌಚದಿ ನುತಿಸಿ ಶಾರದೆವರನ ಮನದೊಳಗೆ ॥ ೧ ॥

ರಾಗ ಮಾರವಿ ಅಷ್ಟತಾಳ

ಕಾಳಗದೊಳಗೇಳು ದಿನ ಸಂದುವಿಂದಿಗೆ । ತಮ್ಮ ಕೇಳು ॥ ಕಲಿ । ಖೂಳ ಸಚಿವ ಚಂದುಗಿಡಿ ಕಾದಿ ಮಡಿದನು । ತಮ್ಮ ಕೇಳು ॥ ೧ ॥ ಆಸೆದೊರೆದು ಜೀವ

ದಾಸೆಗೆ ಬೆಂಗೊಟ್ಟು । ತಮ್ಮ ಕೇಳು ॥ ಸೇನೆ । ಹೇಸದೋಡಿತು ಕಾದಿ ಗೆಲುವ ನಾವನು ಬಪ್ಪ । ತಮ್ಮ ಕೇಳು ॥ ೨ ॥ ಆದುದಾಗಲಿ ಮುಂದೆ ಕಂಡೆ ಕನಸ ನೊಂದಾ । ತಮ್ಮ ಕೇಳು ॥ ಒಬ್ಬ । ಯೋಧ ಮಹಿಷವೇರಿ ಪೋದ ತೆಂಕಣ ಕಿಂದು । ತಮ್ಮ ಕೇಳು ॥ ೩ ॥ ಪೀತವರ್ಣಾಂಬರಧಾರಿ ತೈಲವನಿಟ್ಟು । ತಮ್ಮ ಕೇಳು ॥ ನವ । ನೂತನ ವಾದ್ಯರವದಿ ಪೋದ ನಗುತಿಂದು । ತಮ್ಮ ಕೇಳು ॥ ॥ ೪ ॥ ನಿದ್ದೆಯೊಳಿದ್ದಾಗ ಬಿದ್ದೆ ಮುಂದೆಡರಿದೆ । ತಮ್ಮ ಕೇಳು ॥ ಇಂದಿ । ನ್ಯುದ್ಧದ ಪರಿಯೆಂತೊ ವರದೆಯುರಸ ಬಲ್ಲ । ತಮ್ಮ ಕೇಳು ॥ ೫ ॥ ಇಂದಿನ ಧುರದೊ ಳರಿಷ್ಟವಿಪ್ಪುದರಿಂದೆ । ತಮ್ಮ ಕೇಳು ॥ ನೀ । ಪಿಂದಿರು ಬಂದರಿಯೊಳು ಧುರ ಗೈವೆ ನಾ । ತಮ್ಮ ಕೇಳು ॥ ೬ ॥

ಕಂದ

ಇಂತೀ ಪರಿಯೊಳಗಿರುತಿರೆ । ಪಂಥದೆ ರಣದೊಳಗೊರಗಿದ ಮಂತ್ರಿಯು ನತ್ತಂ ॥ ಚಿಂತಿಸಿ ಕೇಮರ ಬಿಸುಸು । ಯ್ದಿಂತಾಲೋಚಿಸುತಿರ್ದಂ ಮನ ಮರುಕದೊಳುಂ ॥ ೧ ॥

ಭಾಮಿನಿ

ಸೆಣಸಿನೊಳು ಮದ್ಬಲಕೆ ರಿಪುಬಲ । ದವಕ ಮಿಗಿಲಾಯ್ತುಕಟವಿಂದಿನ । ರಣದಿ ಮಡಿದನು ಗರುವ ಬಲ ಬಲಬಾಹು ಮಂತ್ರೀಶ ॥ ಕಣನೊಳಗೆ ರಿಪು ಜವಲುಳಿಯು ಬಿಲ್ । ಗುಣವ ಕಾಣಲು ಬರುತದ್ಯೆ ಮನ । ಅಣಿವೊಡೆದುವೇ ಕಣೆಯೆನುತ ಪಂಜೇಶ ಪೊರವಂಟ ॥ ೧ ॥

ಕಂದ

ಧರಣಿಪನೊದಗಲ್ ರಣಕಂ । ಭರದೊಳದಂ ವರದೆಯಾಣ್ಮಭುಜಕಂ ನೋಡಲ್ ॥ ಕಿರಿಯನ ತಡೆದೊಡನಯ್ತಂ । ದೊರೆದಂ ಗಡನಕ್ಕು ಮತ್ತೆ ಬಲ ಮೊತ್ತರಿಸೀ ॥ ೧ ॥

ರಾಗ ನೀಲಾಂಬರಿ ತ್ರಿವುಡೆತಾಳ

ಭಳಿಭಳಿರೆ ಬಲವಂತನೇತರ । ಬಲದಿ ಬಂದೆಯು ನಿನ್ನ ಕಾಂಬರೆ । ನಲಿಯು ತಿದೆ ಮನವೆನ್ನ ಬರಿಸೈ । ಬಲದಭುಜನ ॥ ೧ ॥ ಜಾತಶತ್ರುವೆ ದೇವರಾಜಗ । ನೀತ ಧೂರ್ತ ದುರಾತ್ಮ । ಮಂತ್ರಿಯು । ಮಾತನಾಲಿಸಿ ಕೆಟ್ಟವನು ಜಯ । ದಾಸೆ ಬೇಡೈ ॥ ೨ ॥ ಬಿಗುತನದ ಬಿಂಕವನು ಬಿಡು ಬಿಡು । ಮುಗುಳೆ ರಣದೊಳು ನಿನ್ನುದರವನು । ಬಗಿವ ಪರಿ ನೋಡೆನುತ ಬಾಣವ । ನೊಗೆದನಾಗ ॥ ೩ ॥ ಖತಿಯೊಳವ ತರಿಯುತ್ತ ಕೋಟೆಯು । ಹತಿಸೆ ತುರಗವನಂದು ಕೇಮರ । ಗತಿ

ಯರಿಯುದೋಡಲ್ಕೆ ನಗುತಿರ । ಲತಿ ಬಲಾಢ್ಯ ॥೪॥ ಧಾರಿಣಿಪ ನೋಡದಿರು ನಾ ಕೊಲ । ಲಾರೆ ಭೀರುವೆನೆನುತಿರಲು ಪೊಸ । ಕೂರಲಗು ನಾಟಲ್ಕೆ ಕೋಟಿ ಶ । ರೀರವನ್ನು ॥ ೫ ॥ ಹರ ಹರಾ ಮರೆಸೇರ್ದೆಸೆದನೀ । ಶರವದ್ಯಾವನು ಧೀರನೈ ವ್ಯಾ । ಧರ ಶಿರೋಮಣಿ ಎನುತೊರಗಿದನು । ಧರೆಯೊಳಾಗ ॥ ೬ ॥

ಭಾಮಿನಿ

ನೋಡಿದನು ಹುದುಗಿಹ ನೃಪನ ವಾ । ತಾಡಿಸಿದ ಛಲವಂತ ಭಲರೇ । ರೂಢಿಪತಿ ಕರ್ತವ್ಯ ಖಳತನವಲ್ತೆ ನೀ ಗೈದ ॥ ಮೋಡಿತನದಭ್ಯಾಸವೊಳ್ಳಿತು । ಪಾಡಗಾಣೆನು ನಿನಗೆ ದೈವವು । ಕೂಡಿಹುದು ಮೊಗದೋರು ಕೊಲೆ ಎನ್ನಾಣೆ ಭಯವಿಲ್ಲ ॥ ೧ ॥ ಏಸು ಸುಕೃತನೊ ನಿನ್ನ ಗುರುವಿ । ನ್ನೇಸು ಧನ್ಯರೊ ಪೆತ್ತವರು ತವ ॥ ಮೋಸಗಾರಿಕೆ ಚರಿತೆ ರೂಢಿಯೊಳೀ ಕಥನ ಬಿಡದೆ ॥ ನೇಸರಿರುವನಕವು ಮನದೊಳ । ಭ್ಯಾಸ ಗೈವರು ಧೊರೆತನಕೆ ಮೇ । ಲ್ವಾಸು ಧನ್ಯರು ಜಗದಿ ಕೀರ್ತಿಯ ಪಡೆದೆ ನೀನೆಂದ ॥ ೨ ॥ ಹಿಂದೆ ರಾಘವನಿಂದ್ರತನಯನ । ಕೊಂದ ಕಥನವಿದಾಯ್ತು ಕಲಿಯುಗ । ಕೊಂದು ರಘುಕುಲತಿಲಕ ನೀ ಸಂದೇಹ ವಿನಿತಿಲ್ಲ ॥ ಇಂದುಮುಖಿಯರು ನಗರೆ ನೀ ಮರೆ । ಸಂದು ಸೆಣಸಿಲಿ ಭಟನ ಸಂಧಿಸಿ । ಕೊಂದೆನೆಂದರೆ ಸೂಕರೇ ರಾಣಿಯರು ನಿನ್ನುವನು ॥ ೩ ॥ ಸಾಯಿಗರು ರಘುಪತಿಗೆ ವಾನರ । ವಾಯುಸುತ ರವಿತನಯ ಜಾಂಬವ । ಮಾಯು ವಿಶ್ವಕೃತತನಯ ಖಳಕುಲ ವಿಭೀಷಣರು ॥ ಜೀಯ ನಿನಗ್ಯಾರಿಹರು ರಾಮು ಸು । ಕಾಯು ಪರತರಮೂರ್ತಿ ನಿನ್ನೀ । ಪಾಯು ಧರೆಯೊಳು ಪುಣ್ಯರಹಿತ ಪ್ರಸಂಗವಾಯ್ತೆಂದ ॥ ೪ ॥ ಆಸೆ ದೇಹದೊಳಿಲ್ಲ ಕೇಳಲು । ಹೇಸುತಿದೆ ತವ ಧುರಚಮತ್ಕೃತಿ । ನೀ ಸಲಹಿದೀ ದೇಹ ನಿನ್ನಯ ಶರಕೆ ಬಲಿಯಾಯ್ತು ॥ ಏಸು ಹೇಳಿದರೇನು ನಿನ್ನೊಳು । ದೋಷ ಕಾಣೆ ಪುರಾಕೃತದ ಫಲ । ವಾಸಲಳಿವುದೆ ಸಾಕು ಬಿಡು ವೈರವನು ನೀನೆಂದ ॥ ೫ ॥

ರಾಗ ಸಾವೇರಿ ಝಂಪೆತಾಳ

ಬಾಲ ಜರೆಯದಿರೆನ್ನ ತಪ್ಪನೆಸಗಿದೆ ನಿನ್ನ । ಮೇಲೆ ಮುನಿಸಿನ್ನಿಲ್ಲ ಕೇಳು ಸುಳ್ಳಲ್ಲ ॥ ಲೀಲೆಯೊಳು ನಿಮ್ಮ ಸಲಹಿದೆ ಕೊಂದೆ ನೆಲಕಾಗಿ । ಪೇಳಲಸದಳ ನಿನ್ನ ಮಹಿಮೆಯನು ಮುನ್ನ ॥೧॥ ಇರೆನು ಮುಂದೀ ಜಗದಿ ತೊರೆದು ದೇಹವ ಮುದದಿ । ಬರುವೆ ನಿನ್ನೊಡನೆ ನಿರ್ಭಯದಿ ನಾ ಜವದಿ ॥ ಬರಿದೆ ನೀನಾಡದಿರು ಇರಿದು ಸತ್ತರೆ ಎನ್ನ । ಬರಿದೆ ನಿಂದಿಪರೆ ಬಲು ನೊಂದೆನಿದರಿಂದೆ ॥ ೨ ॥ ಚಿಂತಿಸದಿರೆಂದು ನೃಪ ಸಂತಸದಿ ಕೂರಸಿಯು । ನಾಂತುವರಕವ ನೀಡಿದಂತರವ

ನೋಡಿ ॥ ಚಿಂತೆಯಲಿ ಕೋಟಿ ತಾನಾಗ ಕರವಿಡಿದು ತಡೆ । ದಿಂತು ಭೂಪನೊ ಳೆಂದ ತರವಿದಲ್ಲೆಂದ ॥ ೩ ॥ ಬೇಡ ತಡೆಯಾತ್ಮಹತಿ ಮಾಡಿ ಕೊಳದಿರು ಬರಿದೆ । ರೂಢಿಪತಿ ಪೋಗು ರಾಜ್ಯವನದರ ವಿಭವ ॥ ಕೂಡೆ ಪಾಲಿಸು ಬೇಸರವ ಕಾಣೆ ನೆನ್ನಾಣೆ । ಕಾಡದಿರು ಪ್ರಜೆಯ ಸೊಗದಿಂದೆ ನೀ ಮುಂದೆ ॥ ೪ ॥ ಧನ್ಯನಹೆ ನೆಮ್ಮವರು ಉನ್ನತದ ಗರಡಿಯೊಳು । ಎನ್ನ ಪ್ರತಿರೂಪವನು ಗೆಯ್ದು ಮನ ಒಲಿದು ॥ ಸನ್ನುತದಿ ಪಾಡಿ ಪೊಗಳಲು ಬಪ್ಪುದೈ ಸಿರಿಯು । ಮುನ್ನೆಸಗುವಂತೆ ದಯವಿರಲಿ ನಿನ್ನಲ್ಲಿ ॥ ೫ ॥ ಅರುಹಿ ನೀತಿಯನತ್ತ ಮರುಗುತಿಹ ನೃಪತಿಕುಲ । ವರಮಣಿಯ ದೇವನನು ನೋಡಿ ಮಾತಾಡಿ ॥ ಅರಸ ಬೇಸರಿಸದಿರು ಕಾಯ್ದೆ ನಮ್ಮನು ನಿನ್ನ । ಪರಮಕರುಣದಿ ನೀನು ಧನ್ಯ ಸಂಪನ್ನ ॥ ೬ ॥ ಮುಂದೆ ಪಾಲಿಸು ಧರೆಯ ಪೆರುಮಳನ ಸಖ್ಯದೊಳ । ಗೊಂದೆ ಬುದ್ಧಿಯು ಮುಂದೆ ಇರಲಿ ನೆನಪಿರಲಿ ॥ ಮಂದಿ ಮಾರ್ಬಲಕೆ ಸುಖವಿರಲೆಂದು ಕಂಡು ಗೋ । ಳೆಂದಳುವ ತಮ್ಮನೊಡನೆಂದ ಮಾತೊಂದ ॥ ೭ ॥

ಭಾಮಿನಿ

ಧುರಕೆ ಬೆದರುವನಲ್ಲ ಶಿಳಿಮುಖ । ವೆರಗಿ ಮರ್ಮವ ಭೇದಿಸಲು ನಾ । ನಿರಿಯೆನಹಿತರ ಹರುಷ ತೆರಳಿದನಲ್ತೆ ಚಂದುಗಿಡಿ ॥ ಮರುಗಬೇಡನುಜಾತ ಕಾಯುವ । ನಿರಿಸು ಶಿವನಿದಿರಾಗಿ ಕಾಂಬೆನು । ಜರಗಿದಾರತಿ ಕುವರಗೆನುತ್ತೈದಿ ದನು ಸುರಪುರಕೆ ॥ ೧ ॥ ಪೊಳೆವ ಕುಂಡಲದ್ಯುತಿ ಕಪೋಲದ । ಎಳೆನೊಸಲ ನಿಡಿದೋಳ ಬಟ್ಟೆದೆ । ಗಳ ಮೃಣಾಲದ ದೃಢನಡುವಿನುಡುಗಣ್ಣ ಕೆಂಪಡೆದ ॥ ಥಳಥಳಿಪ ದಿನಮಣಿ ಸಭವ ಬಿ । ಟ್ಟಿಳೆಗೊರಗುವೋಲ್ ದೇವಿಕುವರನು । ಕಲಹದೊಳು ಬಲು ನೊಂದು ಮಲಗಿದನಾ ಧರಿತ್ರಿಯೊಳು ॥ ೨ ॥

ಕಂದ

ಪ್ರಾಣವ ಬಿಟ್ಟಗ್ರಜನಂ । ಕಾಣುತ್ತಲೆ ಧೈರ್ಯವಾರ್ಧಿ ಕಲ್ಲೆದೆ ತನ್ನಂ ॥ ತಾನಾರ್ದು ಚೆನ್ನ ಧರೆಯೊಳ್ । ಮೇಣೇತರ ಗತಿಯೆನುತ್ತೆ ಮೂರ್ಛೆಯ ನಯ್ದಂ ॥ ೧ ॥

ರಾಗ ಘಂಟಾರವ ರೂಪಕತಾಳ

ಹರ ಹರೀಗಳು । ಬರಿದೆ ಧುರದೊಳು । ಮುರಿದು ಕೋಲ್ಗಳು । ಬಿದ್ದ । ಹೊರಳ್ವೆಯಾ ಪೇಳು ॥೧॥ ಮಾರಿ ಮುನಿದಳೊ । ಮೀರಿ ಧುರದೊಳು । ಸೂರೆ ಪೋದಳೊ । ಧುರದಿ । ಜಯವಧು ಬಲು ॥ ೨ ॥ ಎತ್ತ ಪೋದುದು । ಸತ್ತ್ವ ವೀದಿದು । ಮೃತ್ಯುಬಾಯ್ಗಿದು । ದೇಹ । ತುತ್ತು ಗೊಂಡುದು ॥ ೩ ॥ ಸಿಟ್ಟು

ಗೊಂಬರೆ । ದೃಷ್ಟಿ ತೆರೆದರೆ । ಬಿಟ್ಟು ಪೋಪರೆ । ಒಡ । ಹುಟ್ಟಿದವನಿರೆ ॥ ॥ ೪ ॥ ಏಳು ಏಳಯ್ಯ । ಕಾಳಗಕಾರ್ಯ್ಯ । ಬಾಳವಿರ್ಪುದು । ಬರಿದೆ । ಕಾಲ ವೀಂದುರ್ದು ॥ ೫ ॥

ರಾಗ ಹರಿಕಾಂಭೋಜಿ ತ್ರಿವುಡೆತಾಳ

ನೊಂದೆನ್ನೈ ಚಿಂತಾಗ್ನಿಯಿಂದಲಿ । ಬೆಂದೆನ್ನೈ ಒಡಹುಟ್ಟಿದಾತನು । ಸಂದನ್ನೈ ಕಣನೊಳಗೆ ಮದ್ಬಲ । ಕಂದಿಹೀದು ॥ ೧ ॥ ಅಗಲಿದರೆ ಅಶ್ವಿನಿಗಳೆಂದಿಗು । ಜಗದಿ ಕುಶಲವರಂತೆ ಮಾದ್ರಿಯು । ಣುಗರು ಕಟ್ಟೊಡೆದಿಲ್ಲವ್ವೆ ಸಲೆ । ಜಗದಿ ಮುಂದೆ ॥ ೨ ॥ ಬಾಳಲಾರೆನು ಮನದ ವೇದನೆ । ತಾಳಲಾರೆನು ವೈರತೆಯು ಭೂ । ಪಾಲರಿರ ಮರೆತೆಲ್ಲವನು ಮನ । ಮೋಳದಲ್ಲಿ ॥ ೩ ॥ ಒಮ್ಮನದಿ ನೆರ ವಾಗಿ ಪ್ರಜೆಗಳ । ನೆಮ್ಮದಿಯ ಚಿಂತಿಸಿ ಪೊಡವಿಯನು । ಸಮ್ಮತದಿ ಪೊರೆ ಯಲ್ಕೆ ಕಾವನು । ಬೊಮ್ಮದೇವ ॥ ೪ ॥ ಬಾವ ಬಾ ಬಾರಿತ್ರಲನುಜೆಯು । ಭಾವ ಶುದ್ಧದಿ ಪಾಲಿಸೆನೆ ಮ । ದ್ಭಾವನೆಯ ನಿಜಗೊಳಿಸು ತಬ್ಬಲಿ । ಭಾವಕಿಯಳ ॥

ರಾಗ ನೀಲಾಂಬರಿ ಆದಿತಾಳ

ಎಂದೀ ಪರಿಯೊಳಗರುಹುತಲಾ ಕ್ಷಣ । ಮುಂದಿರುವಶ್ವಿಯನು ॥ ಚಂದ ದೊಳೀಕ್ಷಿಸಿ ಶಿರವ ತಾಟಾಡಿಸಿ । ಪೊಂದಿದ ಮುಕ್ತಿಯನು ॥ ೧ ॥ ದೇವನಾರಿ ಯರಾಗ ದೇವಿಯ ಕಂದರ । ನಾಯುತದೊಳಗೆತ್ತುತ ॥ ದೇವಲೋಕವ ಸಾರೆ ದೇವರಾಜಾದಿಗಳ್ । ಭಾವಶುದ್ಧದೊಳಿತ್ತಲು ॥ ೨ ॥ ನೃಪತಿಲಕರು ಕೂಡಿ ಅಪರಕ್ರಿಯೆಯ ಮಾಡಿ । ಚಪಲತೆಯನು ತೊರೆದ ॥ ಅಪರೂಪ ವೀರರ ವಿಗ್ರಹ ವಿರಚಿಸಿ । ಉಪಚರಿಸುತಲಿರ್ದರು ॥ ೩ ॥

ರಾಗ ಮಾರವಿ ಏಕತಾಳ

ಆರತಿಯ ಬೆಳಗಿ ತುಳು । ಧಾರಿಣಿಯೊಳವತರಿಸಿ । ವೀರಾಧಿವೀರರೆಂದೆನಿಸಿ॥ ಚಾರು ಭಕ್ತಿಯ ಬಲೆಗೆ । ಸೇರಿಸುತ ಕಮಲಜನ । ಸೂರೆಗೊಂಡರಿಗೆ ಕದನ ವನು ॥ ೧ ॥ ದೇವಿಗರ್ಭದೊಳುದಿಸಿ । ಕೋವಿದನ ಸಂಹರಿಸಿ । ಭೂವಿಬುಧ ನಾಜ್ಞೆಯನು ಧರಿಸಿ ॥ ಭಾವಶುದ್ಧದಿ ಸ್ವಾಮಿ । ಯಾಜ್ಞೆಯನು ಕೈಗೊಂಡು । ಕಾವ ಬಂಟರಿಗೆ ಹರುಷದಲಿ ॥ ೨ ॥

ರಾಗ ನೀಲಾಂಬರಿ ಏಕತಾಳ

ಸಂತತ ಈ ಚರಿತಾಂತರವನು ಕೇಳ್ವ । ಸಂತರ ಪೊರೆವ ಲಕ್ಷ್ಮೀ ॥ ಕಾಂತ ಕ್ರೋಡಾಸನ ಈಶ ಮಹೇಶನು । ಚಿಂತಿಪ ಭಕ್ತರನ್ನು ॥ ೧ ॥ ಕಟ್ಟಿದ ಕೃತಿ

ಪಂದುಬೆಟ್ಟಿನೊಳಗೆ ತಾನು । ಪುಟ್ಟಿದ ತಿರುಪತಿಯು ॥ ಬೆಟ್ಟದೇವನ ಪೆಸರಾತ ಮನದಿ ಗುರು । ಶ್ರೇಷ್ಠರ ಪೂಜಿಸುವ ॥ ೨ ॥ ಕ್ಷೀರ ನೀರಿಲಿ ವರ ಸಾರಸ ಸಾರವ ॥ ಹೀರುವ ತೆರವಿದರ ॥ ಸಾರವ ಗ್ರಹಿಸುತ ತೋರಲು ಕೊರತೆಯು । ದೂರಗೆಯ್ಯಲು ಧನ್ಯನು ॥ ೩ ॥

## ಮಂಗಲ

ಕ್ಷೀರವಾರಿಧಿಯ ಬಿಟ್ಟು । ಗೋಪಿಯ ತೊಟ್ಟು ॥ ಕ್ಷಾರವಾರಿಧಿಯ ತಟ್ಟು । ಸೇರಿದ ಗುಟ್ಟು । ಯಾರಿಗೆ ಕೊಟ್ಟು । ಬಾರಕನ್ಯಾಪುರ ಸೇರಿದೆ ಜಿಷ್ಣು ॥ ಮಂಗಲಂ ಜಯ ಮಂಗಲಂ ॥ ೧ ॥ ಪಾಲಿಸು ಸುರರಕ್ಷ । ಪಾಂಡವಪಕ್ಷ । ಖೂಳ ರಕ್ಕಸರ ಶಿಕ್ಷ । ಪಾಲಿತಋಕ್ಷ । ಕಾಲಿಗೆ ದಕ್ಷ । ಲಾಲಿಸಿ ಪೊರೆ ಗೋಪಾಲಕವಕ್ಷ ॥ ಮಂಗಲಂ ಜಯ ಮಂಗಲಂ ॥ ೨ ॥

**ಯಕ್ಷಗಾನ ಜೈದ್ಯರ್ಕಳ ಪ್ರತಾಪ ಮುಗಿದುದು**

---

ಪಾವಂಜೆ ಗುರುರಾವ್ ಅಂಡ್ ಸನ್ಸ್ ಇವರಿಂದ ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ
ಮುದ್ರಿಸಲ್ಪಟ್ಟು ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಲ್ಲಿ ಪ್ರಕಟಿಸಲ್ಪಟ್ಟಿತು
S. ೧೪೭/O. 808/R. 954 1000-12-1966

## ಪಾತ್ರಗಳ ವಿವರ

| | |
|---|---|
| ಕೋಟಿ ಚೆನ್ನಯರು: | ಕಥಾನಾಯಕರು |
| ಪೆರುಮಾಳ ಬಲ್ಲಾಳ: | ಪಡುಮಲೆಯ ರಾಜ |
| ಮಲ್ಲಯ ಬುದ್ಧಿವಂತ: | ಪೆರುಮಾಳ ಬಲ್ಲಾಳನ ಮಂತ್ರಿ |
| ಕೇಮರ ಬಲ್ಲಾಳ: | ಪಂಜದ ಅರಸ |
| ಚಂದುಗಿಡಿ: | ಕೇಮರ ಬಲ್ಲಾಳನ ಮಂತ್ರಿ |
| ದೇವ ಬಲ್ಲಾಳ: | ಎಣ್ಮೂರ ರಾಜ |
| ಮಂಜು ಪೆರ್ಗಡೆ: | ದೇವ ಬಲ್ಲಾಳನ ಸಭಾನಾಯಕ |
| ಅಕ್ಕೆರಸ ಪೂಂಜೆದಿ: | ಮಲ್ಲಯ ಬುದ್ಧಿವಂತನ ಹೆಂಡತಿ |
| ದೇವಿ: | ಕಥಾನಾಯಕರ ತಾಯಿ |
| ಕಿನ್ನಿದಾರು: | ದೇವಿ ಬೈದಿತಿಯ ಮಗಳು |
| ಸಾಯಿನಬೈದ್ಯ: | ಕಥಾನಾಯಕರ ಮಾವ |
| ಬೊಮ್ಮಯ: | ಪಡುಮಲೆಯಲ್ಲಿ ಜಮೀನುದಾರ |
| ಪೈಯ್ಯ ಯಾನೆ ಬನ್ನಯ: | ಕಥಾನಾಯಕರ ಭಾವ (ಕಿನ್ನಿದಾರುಗಂಡ) |

ಇತರ ಪಾತ್ರಗಳು: ಜೋಯಿಸ, ಬುದ್ಧಿವಂತನ ಮಕ್ಕಳು, ಶರಬಲ, ಪುರಜನರು, ಚಾರಕರು, ಬ್ರಹ್ಮ, ಬಾಣಸಿ, ಸ್ತ್ರೀಯರು, ಗಜನೆಂಬ ರಕ್ಕಸ.

---